ಪ್ರಚಾರ ಪುಸ್ತಕ ಮಾಲೆ

100

(೧)

# ವಿಶ್ವವಿದ್ಯಾನಿಲಯದ ಪ್ರಸಾರಾಂಗ

ಡಾ. ಕೆ. ವಿ. ಪುಟ್ಟಪ್ಪ, ಎಂ.ಎ.,ಡಿ.ಲಿಟ್.



# ಕೆಲವು ಸಾಹಿತ್ಯ ಕೃತಿಗಳು

೧. ಕುಮಾರವ್ಯಾಸ—ಎಸ್. ವಿ. ರಂಗಣ್ಣ
೨. ಹಂಪೆಯ ಹರಿಹರ—ಡಿ. ಎಲ್. ನರಸಿಂಹಾಚಾರ್
೩. ಕನ್ನಡ ಸಾಹಿತ್ಯ— ಕೆ. ವೆಂಕಟರಾಮಪ್ಪ
೪. ಪಂಪ— ತೀ. ನಂ. ಶ್ರೀಕಂಠಯ್ಯ
೫. ಕರ್ಣಾಟಕ ಕಾದಂಬರಿ—ವಿ. ಸೀತಾರಾಮಯ್ಯ
೬. ಕಾಳಿದಾಸನ ಕಾವ್ಯಗಳು—ಎಸ್. ರಾಮಚಂದ್ರರಾವ್
೭. ಭಾಸ—ಡಾ. ಎಚ್. ಎಲ್. ಹರಿಯಪ್ಪ
೮. ಸರ್ವಜ್ಞಕವಿ—ಎ. ಆರ್. ಕೃಷ್ಣಶಾಸ್ತ್ರೀ
೯. ಇಂಗ್ಲಿಷ್ ಪ್ರಬಂಧಗಳು—ಎಸ್. ಮಂಜುನಾಥ್
೧೦. ಅಕ್ಕಮಹಾದೇವಿ—ಎಸ್. ವಿ. ಪರಮೇಶ್ವರಭಟ್ಟ
೧೧. ಕುಮಾರವ್ಯಾಸ ವಾಣಿ—ಎಸ್. ವಿ. ರಂಗಣ್ಣ
೧೨. ನಯಸೇನ—ಜಿ. ವೆಂಕಟಸುಬ್ಬಯ್ಯ
೧೩. ತೆಲುಗು ಚಾಟುಪದ್ಯಗಳು—ಕೆ. ವೆಂಕಟರಾಮಪ್ಪ
೧೪. ಲಕ್ಷ್ಮೀಶ—ಎನ್. ಅನಂತರಂಗಾಚಾರ್
೧೫. ಮುದ್ದಣ—ತ. ಸು. ಶಾಮರಾವ್
೧೬. ಜನಪದ ಮುಕ್ತಕಗಳು—ಎಚ್. ಎಂ. ಶಂಕರನಾರಾಯಣರಾವ್
೧೭. ಭಾವಗೀತೆ—ಎಸ್. ವಿ. ಪರಮೇಶ ರಭಟ್ಟ
೧೮. ಮಹಾಭಾರತ—ಡಾ. ಕೆ. ಕೃಷ್ಣಮೂರ್ತಿ
೧೯. ನೇಮಿಚಂದ್ರ—ಎನ್. ಅನಂತರಂಗಾಚಾರ್
೨೦. ಶ್ರೀನಾಥ—ಕೆ. ವೆಂಕಟರಾಮಪ್ಪ
೨೧. ಷಡಕ್ಷರದೇವ—ದೇ. ಜವರೇಗೌಡ
೨೨. ಚಿತ್ರಾಂಗದಾ—ಉ. ಕಾ. ಸುಬ್ಬರಾಯಾಚಾರ್
೨೩. ಸಂಚಿಯ ಹೊನ್ನಮ್ಮ—ಎಚ್. ಎಂ. ಶಂಕರನಾರಾಯಣರಾವ್
೨೪. ವಾಲ್ಮೀಕಿ ರಾಮಾಯಣ—ಉ. ಕಾ. ಸುಬ್ಬರಾಯಾಚಾರ್
೨೫. ಮಹಾಕವಿ ಬಾಣ—ಟಿ. ಎಸ್. ಕೃಷ್ಣಮೂರ್ತಿ
೨೬. ತುಳಸೀದಾಸ—ಡಾ. ಹಿರಣ್ಮಯಿ
೨೭. ವೇಮನ—ಕೆ. ವೆಂಕಟರಾಮಪ್ಪ
೨೮. ಕನ್ನಡದಲ್ಲಿ ಅನುಭಾವ ಸಾಹಿತ್ಯ—ಡಾ. ಎಚ್. ತಿಪ್ಪೇರುದ್ರಸ್ವಾಮಿ
೨೯. ಅಲ್ಲಮಪ್ರಭು—ಡಾ. ಟಿ ಜಿ. ಸಿದ್ಧಪ್ಪಾರಾಧ್ಯ
೩೦. ಕಾಳಿದಾಸನ ನಾಟಕಗಳು—ಡಾ. ಕೆ. ಕೃಷ್ಣಮೂರ್ತಿ

ಪ್ರಚಾರ ಪುಸ್ತಕಮಾಲೆ-೧೦೦

# ವಿಶ್ವವಿದ್ಯಾನಿಲಯದ
# ಪ್ರಸಾರಾಂಗ

**ಡಾ. ಕೆ. ವಿ. ಪುಟ್ಟಪ್ಪ,** ಎಂ.ಎ., ಡಿ.ಲಿಟ್.




೧೯೬೧

ಪ್ರಥಮ ಮುದ್ರಣ : ೧೯೫೯
ದ್ವಿತೀಯ ಮುದ್ರಣ : ೧೯೬೦
ತೃತೀಯ ಮುದ್ರಣ : ೧೯೭೧
(೧೦,೦೦೦ ಪ್ರತಿಗಳು)



ಬೆಲೆ: ರೂ. 1-00

ಪ್ರಕಾಶಕರು
ನಿರ್ದೇಶಕರು, ಪ್ರಸಾರಾಂಗ, ಮಾನಸಗಂಗೋತ್ರಿ, ಮೈಸೂರು-೬

ಮುದ್ರಕರು
ನಿರ್ದೇಶಕರು, ವಿಶ್ವವಿದ್ಯಾನಿಲಯ ಮುದ್ರಣಾಲಯ, ಮೈಸೂರು-೬

# ಪೀಠಿಕೆ

ಮೈಸೂರು ವಿಶ್ವವಿದ್ಯಾನಿಲಯದ ವೈಸ್ ಛಾನ್ಸಲರ್ ಆಗಿ ನಾನು ಅಲ್ಲಲ್ಲಿ ಮಾಡಿದ ಭಾಷಣಗಳಿಂದ ಕೆಲಕೆಲವು ಭಾಗಗಳನ್ನು ಆಯ್ದು, ಕೂಡಿಸಿ ಈ 'ಪ್ರಸಾರಾಂಗ' ಹೊತ್ತಿಗೆಯನ್ನು ಹೊರ ತರಲಾಗಿದೆ. ಆದ್ದರಿಂದ ಅನಿವಾರ್ಯವಾಗಿ ಒಮ್ಮೊಮ್ಮೆ ಭಾವ ಭಾಷೆಗಳ ಪುನರಾವರ್ತನೆ, ಬರವಣಿಗೆಯಲ್ಲಿ ಸ್ವಲ್ಪ ಶೈಥಿಲ್ಯ, ಪ್ರಬಂಧದ ಬೆಳವಣಿಗೆಯಲ್ಲಿ ಹೊಂದಿಕೆಯ ಅಭಾವ ಕಂಡು ಬರಬಹುದು. ಆದರೆ, ಇದರ ಒಟ್ಟಿನಲ್ಲಿ ಕಾಣಬರಬಹುದಾದ ಒಂದು ವಿಚಾರ ವಿಧಾನ, ವಿಷಯ ವಿವೇಚನೆಯ ದೃಷ್ಟಿಕೋನ, ಇಲ್ಲಿನ ಭಾವನೆಗಳ ಹಿಂದಿನ ಮನೋಭಾವಗಳು ವಿಚಾರಪರರೆಲ್ಲ ರಿಗೂ ಒಪ್ಪಿಗೆಯಾಗುವುವೆಂದು ನಾನು ಭಾವಿಸಿದ್ದೇನೆ.

ಮೈಸೂರು ವಿಶ್ವವಿದ್ಯಾನಿಲಯದ ಸ್ಥಾಪನೆಯಾದುದು ೧೯೧೬ ರಲ್ಲಿ. ರಾಜಋಷಿಯೆಂದು ಖ್ಯಾತನಾಮರಾದ ಶ್ರೀ ನಾಲ್ವಡಿ ಕೃಷ್ಣರಾಜ ಒಡೆಯರ್ ಅವರು ಮೈಸೂರು ವಿಶ್ವವಿದ್ಯಾನಿಲಯದ ಮೊದಲನೆಯ ಸೆನೆಟ್ ಸಭೆಯನ್ನು ಉದ್ಘಾಟಿಸಿ ಮಾತನಾಡುತ್ತ "ಕಾರಣಾಂತರಗಳಿಂದ ವಿಶ್ವವಿದ್ಯಾನಿಲಯವನ್ನು ಪ್ರವೇಶಿಸಲು ಅಶಕ್ತರಾದ ಜನಸಾಮಾನ್ಯರಿಗೆ ವಿಶ್ವವಿದ್ಯೆಯ ಪರಿಚಯ ಮಾಡಿಕೊಡಲು ನಮ್ಮ ವಿಶ್ವವಿದ್ಯಾನಿಲಯ ಶ್ರಮಿಸಬೇಕು. ಈ ಕಾರ್ಯವು ಪ್ರಚಾರೋಪನ್ಯಾಸ ಮತ್ತು ಪ್ರಕಟಣೆಗಳ ಮೂಲಕ ನಡೆಯಬೇಕಾಗಿದೆ. ಅತ್ಯಂತ ಪ್ರಯೋಜನಕಾರಿಯಾದ ಈ ಮಹತ್ಕಾರ್ಯವನ್ನು ವಿಶ್ವವಿದ್ಯಾನಿಲಯವು ಬೇಗನೆ ಕಾರ್ಯ ರೂಪಕ್ಕೆ ತರುವುದೆಂದು ನಂಬಿದ್ದೇನೆ" ಎಂದು ಹೇಳಿದ ಮಾತು ಇಂದು ನನಸಾಗುತ್ತಿದೆ. ಆ ಕಾರ್ಯ ದಿನದಿನಕ್ಕೂ ಪ್ರಗತಿಗಾಮಿ ಯಾಗಿ ಮುಂದುವರಿಯುತ್ತಿದೆ.

೧೯೩೩ರಲ್ಲಿ ಸ್ಥಾಪನೆಯಾದ ಅಧ್ಯಾಪಕರ ಸಂಘವು ಪ್ರಚಾರೋಪನ್ಯಾಸಗಳನ್ನು ವಿಶ್ವವಿದ್ಯಾನಿಲಯದ ಆಶ್ರಯದಲ್ಲಿ ಪ್ರಾರಂಭಿಸಿತು. ಈ ಉಪನ್ಯಾಸಗಳು ಪುಟ್ಟ ಪುಸ್ತಕಗಳ ರೂಪದಲ್ಲಿ ಪ್ರಕಟವಾಗಿ ಜನಪ್ರಿಯವಾದುವು. ಈ ಪ್ರಯೋಗದ ಖ್ಯಾತಿ ಇಂಗ್ಲೆಂಡಿನವರೆಗೂ ಹಬ್ಬಿತು. ೧೯೩೮ರಲ್ಲಿ ಅಂತರರಾಷ್ಟ್ರೀಯ ವಿಶ್ವವಿದ್ಯಾನಿಲಯಗಳ ಸಮ್ಮೇಳನವು ಆಕ್ಸ್‌ಫರ್ಡಿನಲ್ಲಿ ನಡೆದಾಗ ನಮ್ಮ ಮೈಸೂರು ಮಹಾರಾಜಾ ಕಾಲೇಜಿನ ಪ್ರಿನ್ಸಿಪಾಲ್ ಆಗಿದ್ದ ಪ್ರೊ॥ ಜೆ. ಸಿ. ರಾಲೋ ಅವರು ಮೈಸೂರು ವಿಶ್ವ ವಿದ್ಯಾನಿಲಯದ ಪ್ರತಿನಿಧಿಯಾಗಿ ಹೋಗಿದ್ದರು. ಅಲ್ಲಿ ಪ್ರಚಾರೋಪನ್ಯಾಸಗಳ ಹೊಸ ಪ್ರಯೋಗವನ್ನು ಕುರಿತು ಸಭೆಯಲ್ಲಿ ವಿವರಿಸಿದಾಗ ಸಮ್ಮೇಳನಕ್ಕೆ ಬಂದಿದ್ದ ದೇಶ ವಿದೇಶಗಳ ಪ್ರತಿನಿಧಿಗಳು ತುಂಬ ಮೆಚ್ಚಿದರಂತೆ ! ಈ ಪ್ರಯೋಗವು 'ಮೈಸೂರಿನ ಪ್ರಯೋಗ' ಎಂಬ ಹೆಸರಿನಿಂದ ಪ್ರಖ್ಯಾತವಾಯಿತು.

ಕೆಲವು ವರ್ಷಗಳಲ್ಲಿ ಮೈಸೂರು ವಿಶ್ವವಿದ್ಯಾನಿಲಯವು ಪ್ರಕಟಣೆ ಮತ್ತು ಪ್ರಚಾರೋಪನ್ಯಾಸಗಳಿಗಾಗಿ ತಾತ್ಕಾಲಿಕ ಕಛೇರಿಯನ್ನು ಪ್ರಾರಂಭಿಸಿ ವರ್ಷ ವರ್ಷವೂ ಈ ಕಛೇರಿಗೆ ಜೀವ ದಾನ ಮಾಡುತ್ತಿತ್ತು. ಈಚೆಗೆ ಈ ಪ್ರಕಟಣ ಶಾಖೆಯ ಕಛೇರಿ ಸ್ಥಿರವಾಯಿತು. ದಿನದಿನವೂ ಇದರ ಕಾರ್ಯಕ್ಷೇತ್ರ ವಿಸ್ತೃತ ವಾಗುತ್ತಿದೆ. "ನಹಿ ಜ್ಞಾನೇನ ಸದೃಶಂ" ಎಂಬ ಮೈಸೂರು ವಿಶ್ವವಿದ್ಯಾನಿಲಯದ ಆದರ್ಶವನ್ನು ಕಾರ್ಯರೂಪಕ್ಕೆ ತಂದು ಜನಸಾಮಾನ್ಯರಲ್ಲಿಯೂ ಜ್ಞಾನಪ್ರಸಾರ ಮಾಡಲು ಪ್ರಸಾರಾಂಗವು ಶ್ರಮಿಸುತ್ತಿದೆ. ಪ್ರಸಾರಾಂಗದ ಈ ಕಾರ್ಯವು ಸಮರ್ಪಕವಾಗಿ ನಡೆಯಲು ಜನತೆಯ ಸಹಕಾರ ಅತ್ಯಂತ ಆವಶ್ಯಕ.

ಇಂಗ್ಲಿಷ್ ಮಾಧ್ಯಮದಲ್ಲಿಯೇ ಅಭ್ಯಾಸ ಮಾಡುವ

ಸಾವಿರಾರು ವಿದ್ಯಾರ್ಥಿಗಳ ಶಕ್ತಿ ವ್ಯಯವಾಗುವುದು ನಿಂತು ವಿಶ್ವವಿದ್ಯಾನಿಲಯದಲ್ಲಿ ಕನ್ನಡ ಮಾಧ್ಯಮದಲ್ಲಿಯೂ ಶಿಕ್ಷಣದ ಸಕಲ ಸೌಲಭ್ಯಗಳೂ ದೊರಕಿ ಜ್ಞಾನದ ಪುಷ್ಟಿಶಕ್ತಿಗಳನ್ನು ಪಡೆಯುವುದು ಇಂದು ಸಾಧ್ಯವಾಗಬೇಕು; ಸಾಧ್ಯವಾಗುತ್ತಿದೆ. ವಿಶ್ವವಿದ್ಯಾನಿಲಯದ ಎಲ್ಲ ತರಗತಿಗಳಿಗೂ ಬೇಕಾಗುವ ಪಠ್ಯ ಪುಸ್ತಕಗಳ ಪ್ರಕಟಣೆ ಪ್ರಸಾರಾಂಗದಿಂದ ಪ್ರಾರಂಭವಾಗಿದೆ. ಇನ್ನು ಕೆಲವು ವರ್ಷಗಳಲ್ಲಿ ಪಠ್ಯಪುಸ್ತಕಗಳ ಕೊರತೆ ಇಲ್ಲದೆ ವಿಶ್ವವಿದ್ಯಾನಿಲಯದ ಎಲ್ಲ ತರಗತಿಗಳಲ್ಲಿಯೂ ಕನ್ನಡ ಮಾಧ್ಯಮದಲ್ಲಿಯೇ ಶಿಕ್ಷಣ ದೊರಕುವುದು ಸಾಧ್ಯವಾಗುತ್ತದೆ.

ಪ್ರಸಾರಾಂಗವು ಜ್ಞಾನಸಾಧನೆಗೆ, ಜ್ಞಾನಪ್ರಸಾರಕ್ಕೆ ಬೇಕಾಗುವ ಸಕಲ ಸಾಧನಗಳನ್ನು ಪ್ರಚಾರೋಪನ್ಯಾಸಗಳ ಮೂಲಕ, ಪ್ರಚಾರ ಪುಸ್ತಕಮಾಲೆಯ ಪ್ರಕಟಣೆಗಳ ಮೂಲಕ, ಇತರ ಉದ್ಗ್ರಂಥಗಳ ಪ್ರಕಟಣೆ ಇತ್ಯಾದಿಗಳ ಮೂಲಕ ನಿರ್ವಹಿಸುತ್ತ ನಾಡಿನ ಅತ್ಯುತ್ತಮ ಜ್ಞಾನ ಪ್ರಸಾರ ಕೇಂದ್ರವಾಗಲೆಂದು ಹಾರೈಸುತ್ತೇನೆ.

ಮೈಸೂರು
೧೨-೨-೧೯೬೫

ಕೆ. ವಿ. ಪುಟ್ಟಪ್ಪ
ವೈಸ್-ಛಾನ್ಸಲರ್

## ವಿಷಯಸೂಚಿಕೆ

## ೧. ಪ್ರಸಾರಾಂಗ ಎಂದರೇನು?

ನಮ್ಮ ವಿಶ್ವವಿದ್ಯಾನಿಲಯದ ಕಾರ್ಯ ಕಲಾಪಗಳನ್ನು ಮೂರು ಅಂಗಗಳಾಗಿ ವಿಭಾಗಿಸಬಹುದು—ಸಂಶೋಧನಾಂಗ,ಬೋಧನಾಂಗ ಮತ್ತು ಪ್ರಸಾರಾಂಗ ಎಂದು. ಇವುಗಳಲ್ಲಿ ಮೊದಲನೆಯದಾದ ಸಂಶೋಧನಾಂಗ ವಿಶ್ವವಿದ್ಯಾನಿಲಯದ ತಲೆಯಿದ್ದಂತೆ. ಇದು ಮುಖ್ಯವಾಗಿ ಎಂ.ಎ., ಎಂ.ಎಸ್‌ಸಿ., ಮತ್ತು ಅವಕ್ಕೂ ಮುಂದಿನ ವ್ಯಾಸಂಗಕ್ಕೆ ಸಂಬಂಧಪಟ್ಟ ಮೇಲ್ಮಟ್ಟದ ಕೆಲಸ. ಎರಡನೆಯದಾದ ಬೋಧನಾಂಗ ವಿಶ್ವವಿದ್ಯಾನಿಲಯದ ಕೈ ಇದ್ದಂತೆ. ಇಂದಿನ ಪೀಳಿಗೆಯವರು ಸುಸಂಸ್ಕೃತರಾಗಿ, ನಾಗರಿಕರಾಗಿ, ವಿದ್ಯಾವಂತರಾಗಿ ಪ್ರಪಂಚದ ಇತರ ಜನಗಳೊಡನೆ ಸಮಸ್ಪರ್ಧಿಗಳಾಗಿ ಹೇಗೆ ಬಾಳಬೇಕೆಂದು ಕಲಿಸುವುದು ಇದರ ಕೆಲಸ. ಇದರಲ್ಲಿ ಸ್ನಾತಕೋತ್ತರದ ಬೋಧನೆ, ಅಭ್ಯಾಸಗಳು ಒಂದು ಭಾಗವಾದರೆ ಸ್ನಾತಕಪೂರ್ವ ಶಿಕ್ಷಣ ಜ್ಞಾನಾರ್ಜನೆಗಳು ಇನ್ನೊಂದು ಭಾಗ. ಈ ಎರಡು ಅಂಗಗಳಿಗಿಂತಲೂ ಮುಖ್ಯವೆಂದು, ಮೂಲಭೂತವೆಂದು, ಅತ್ಯಂತ ಆವಶ್ಯಕವೆಂದು ನನಗೆ ತೋರುತ್ತಿರುವ ಅಂಗವೆಂದರೆ ಪ್ರಕಟಣೆ ಮತ್ತು ಪ್ರಚಾರೋಪನ್ಯಾಸಗಳ ಅಂಗ. ಇದನ್ನು 'ಪ್ರಸಾರಾಂಗ' ಎಂದು ಕರೆಯಬಹುದು. ಇದೇ ವಿಶ್ವವಿದ್ಯಾನಿಲಯದ ಜೀವನಾಡಿ ಮಿಡಿಯುತ್ತಿರುವ ಹೃದಯ.

ಈ ಪ್ರಸಾರಾಂಗ ಪ್ರಾರಂಭವಾಗಿ ಸುಮಾರು ಕಾಲು ಶತಮಾನವಾಗಿದೆ. ನಮ್ಮ ವಿಶ್ವವಿದ್ಯಾನಿಲಯ ಕೈಕೊಂಡಿರುವ ಈ ಬಗೆಯ ಕಾರ್ಯ, ಈ ರೂಪದಲ್ಲಿ ಭರತಖಂಡದ ಮತ್ತಾವ ವಿಶ್ವವಿದ್ಯಾನಿಲಯದಲ್ಲೂ ಕಂಡುಬಂದಿಲ್ಲ. ನಮ್ಮ ಮಹಿಮೆ, ಮಹತ್ತು ನಮಗೇ

ಗೊತ್ತಿರಲಿಲ್ಲ. ಹೊರಗಿನಿಂದ ಇಲ್ಲಿಗೆ ಬಂದವರು—ಬೇರೆ ಬೇರೆ ಪ್ರಾಂತಗಳ ಗವರ್ನರುಗಳು, ಮಂತ್ರಿಗಳು ವಿಶ್ವವಿದ್ಯಾನಿಲಯಗಳ ಗ್ರಾಂಟ್ಸ್ ಕಮಿಷನ್ನಿನವರು, ಪರದೇಶಗಳ ವಿದ್ಯಾಪರಿಣತರು—ನಮ್ಮ ವಿಶ್ವವಿದ್ಯಾನಿಲಯಕ್ಕೆ ಬಂದು, ಇಲ್ಲಿನ ಪ್ರಕಟಣ ಶಾಖೆಯನ್ನೂ, ಅಲ್ಲಿನ ಪುಸ್ತಕಗಳನ್ನೂ ನೋಡಿ, ಉಪನ್ಯಾಸಗಳ ವಿಚಾರವನು ಕೇಳಿ ಮೂಗಿನ ಮೇಲೆ ಬೆರಳಿಟ್ಟು "ಇದೇನು ಅದ್ಭುತ ಕೆಲಸ ಮಾಡುತ್ತಿದ್ದೀರಿ ! ನಿಮ್ಮ ಜನತೆಗೆ ಈ ವಿಶ್ವವಿದ್ಯಾನಿಲಯ ಇಷ್ಟೊಂದು ಉಪಕಾರ ಮಾಡುತ್ತಿದೆ ! ಭರತಖಂಡದ ಮತ್ತಾವ ವಿಶ್ವವಿದ್ಯಾನಿಲಯದಲ್ಲೂ ಈ ಪ್ರಚಾರೋಪನ್ಯಾಸದ ರೀತಿ, ಈ ಪ್ರಕಟಣೆಯ ವಿಧಾನ—ಇವೆರಡೂ ಇಲ್ಲ" ಎಂದು ಪ್ರಶಂಸಿಸಿ ನಮಗೆ ಹೇಳಿ, ಬರೆದು ತಿಳಿಸಿದ್ದಾರೆ. ಹೀಗೆ ಅವರು ಹೇಳಿದ ಮೇಲೆ ನಮಗೆ ಗೊತ್ತಾಯಿತು—ಓಹೋ, ನಾವೂ ಬಹಳ ಕೆಲಸ ಮಾಡಿದ್ದೇವೆ ಎಂದು.

**ಪ್ರಚಾರೋಪನ್ಯಾಸಗಳು :** 'ಪ್ರಸಾರಾಂಗ'ದ ಕಾರ್ಯ ದ್ವಿಮುಖವಾದುದು. ಅವುಗಳಲ್ಲಿ ಒಂದು ಪ್ರಚಾರೋಪನ್ಯಾಸ, ಮತ್ತೊಂದು ಪ್ರಕಟಣೆ. ಏನು ಈ ಪ್ರಚಾರೋಪನ್ಯಾಸ ? ದೇಶದಲ್ಲಿರುವ ಎಲ್ಲರೂ ವಿಶ್ವವಿದ್ಯಾನಿಲಯಕ್ಕೆ ಹೋಗಲಾರರಷ್ಟೆ ! ಆದರೆ ವಿಶ್ವವಿದ್ಯಾನಿಲಯ ಎಲ್ಲರ ಮನೆಯ ಬಾಗಿಲಿಗೂ ಹೋಗಬಲ್ಲುದು. ದೇಶದಲ್ಲಿ ಎಲ್ಲೆಲ್ಲಿ ಈ ಅಪೇಕ್ಷೆ ಮೂಡುತ್ತದೆಯೋ ಅಲ್ಲಿಗೆ, ಯಾರು ಆಹ್ವಾನಿಸುತ್ತಾರೆಯೋ ಅವರಲ್ಲಿಗೆ, ವಿಶ್ವವಿದ್ಯಾನಿಲಯದ ಅಧ್ಯಾಪಕವರ್ಗದವರು ಮೂರು ನಾಲ್ಕು ಜನ ಬಂದು, ಒಂದೆರಡು ದಿನ ಅಲ್ಲಿಯೇ ತಂಗಿ, ಉಪನ್ಯಾಸಗಳನ್ನು ಕೊಡುತ್ತಾರೆ. ಮಧ್ಯೆ ಮಧ್ಯೆ ಮನರಂಜನೆಯ ಕಾರ್ಯಕ್ರಮಗಳು—ಕಾವ್ಯವಾಚನ, ನಾಟಕವಾಚನ–ಇತ್ಯಾದಿಗಳಿಂದ ಜನತೆಯನ್ನು

ಆಕರ್ಷಿಸಿ,ಉತ್ತಮವಾದ ಉಪನ್ಯಾಸಗಳನ್ನು ಕೊಡುತ್ತಾರೆ. ಮೊದ ಮೊದಲು ಜನರು ಅಪೇಕ್ಷಿಸಿ ಕರೆದಲ್ಲಿಗೆ ಹೋಗುವ ಪದ್ಧತಿ ಇತ್ತು. ಬರಬರುತ್ತಾ ಈ ಕರೆ ಬರುವುದು ಹೆಚ್ಚಾಯಿತು. ಆದ್ದರಿಂದ ವಿಶ್ವ ವಿದ್ಯಾನಿಲಯವು ಈ ಪ್ರಚಾರೋಪನ್ಯಾಸಗಳನ್ನು ಮುಂದುವರಿಸಲು ಸಾಕಷ್ಟು ಹಣವನ್ನು ಮೀಸಲಾಗಿರಿಸಬೇಕಾಯಿತು. ಈ ಉಪನ್ಯಾಸ ಗಳು ಹಿಂದಿನಿಂದ ಕನ್ನಡದಲ್ಲಿ ಬಂದಿರುವ ಕಾವ್ಯಗಳನ್ನು ಕುರಿತು ಮಾತ್ರವೇ ಅಲ್ಲದೆ, ಬೇರೆ ಬೇರೆ ಭಾಷೆಗಳಲ್ಲಿ–ಅದು ಪರ್ಷಿಯನ್ ಭಾಷೆಯಾಗಿರಬಹುದು, ಇಂಗ್ಲಿಷ್ ಭಾಷೆಯಾಗಿರಬಹುದು, ಗ್ರೀಕ್ ಭಾಷೆಯಾಗಿರಬಹುದು–ಆಯಾ ಭಾಷೆಗಳಲ್ಲಿ ತಜ್ಞರಾದ ವರು ಆಯಾ ವಿಷಯಗಳನ್ನು ಕುರಿತು ಉಪನ್ಯಾಸ ಮಾಡುತ್ತಾರೆ. ಇದರಿಂದ ನಮ್ಮ ಜನ ನಮ್ಮ ಸಾಹಿತ್ಯವನ್ನು ಮಾತ್ರವೇ ಅಲ್ಲದೆ, ಇತರ ಸಾಹಿತ್ಯಗಳ ಪರಿಚಯವನ್ನೂ ಪಡೆದುಕೊಂಡಂತೆ ಆಗುತ್ತದೆ. ಇವುಗಳ ಜೊತೆಗೆ ರೇಡಾರ್ ಮೊದಲಾದ ಆಧುನಿಕ ವಿಜ್ಞಾನ ವಿಷಯಗಳು, ಹೆರಿಗೆ ಮತ್ತು ಶಿಶುಸಂರಕ್ಷಣೆ ಅಥವಾ ಕಣ್ಣು ಮತ್ತು ಅದರ ರಕ್ಷಣೆ ಇತ್ಯಾದಿ ವೈದ್ಯಕೀಯ ವಿಷಯಗಳು– ಇಂತಹ ಗಹನವಾದ ವಿಷಯಗಳನ್ನು ಕೂಡ ಎಲ್ಲರಿಗೂ ತಿಳಿಯು ವಂತೆ ಸುಲಭವಾದ ಭಾಷೆಯಲ್ಲಿ ಉಪನ್ಯಾಸ ಮಾಡುತ್ತಾರೆ.

ನಮ್ಮ ಜನ ಬೆವರು ಸುರಿಸಿ ದುಡಿದು ಕೊಟ್ಟ ಹಣದಿಂದ ನಮ್ಮ ಸರ್ಕಾರ ವಿಶ್ವವಿದ್ಯಾನಿಲಯವನ್ನು ನಡೆಸುತ್ತಿದೆ. ಈ ವಿಶ್ವವಿದ್ಯಾನಿಲಯ ಮೇಲ್ಮಟ್ಟದ ಜನಕ್ಕೆ ಬೋಧಿಸುತ್ತಿದೆ. ಅದು ಬೋಧಿಸುವುದು ಜನತೆಗೆ ಗೊತ್ತಾಗದ ಅನ್ಯಭಾಷೆಯಲ್ಲಿ, ಅದರಲ್ಲಿಯೂ ವಿಶೇಷ ಅಧ್ಯಯನ ಮಾಡಿದವರಿಗೆ ಮಾತ್ರ ಅದು ಅರ್ಥವಾಗುತ್ತದೆ. ಜನಸಾಮಾನ್ಯನಿಗೆ ಏನು ಬಂತು? ವಿಶ್ವ ವಿದ್ಯಾನಿಲಯದ ಪ್ರಚಾರೋಪನ್ಯಾಸ ಶಾಖೆ ಜನತೆಯ ಅಂಗ.

ವಿಶ್ವವಿದ್ಯಾನಿಲಯಂದ ಅಧ್ಯಾಪಕರು ಬಂದು, ಜನರೆಲ್ಲರಿಗೂ ತಿಳಿಯುವ ಕನ್ನಡ ಭಾಷೆಯಲ್ಲಿ ಉಪನ್ಯಾಸ ಕೊಟ್ಟು ಜನಸಾಮಾನ್ಯ ರೊಡನೆ ಅವರಂತೆಯೇ ಇದ್ದುಕೊಂಡು, ಅವರು ಕೇಳಿದ ಪ್ರಶ್ನೆ ಗಳಿಗೆಲ್ಲಾ ನೇರವಾಗಿ ಉತ್ತರ ಕೊಟ್ಟು ಸರಸ್ವತಿಯ ಸೇವೆ ಮಾಡಲು ಅವರು ಸಿದ್ಧರಾಗಿದ್ದಾರೆ, ಉತ್ಸುಕರಾಗಿದ್ದಾರೆ. ಆದರೆ ಈ ಕೆಲಸ ಬರಿಯ ವಿಶ್ವವಿದ್ಯಾನಿಲಯಂದ ಅಧ್ಯಾಪಕ ವರ್ಗದವ ರಿಂದ ಮಾತ್ರ ಆಗತಕ್ಕದ್ದಲ್ಲ. ಜನತೆಯ ಸಹಕಾರದಿಂದ ಮಾತ್ರವೇ ಇದು ಸಾರ್ಥಕವಾಗಬೇಕಾದರೆ. ವಿಶ್ವವಿದ್ಯಾನಿಲಯ ಮೊದಲಿ ನಿಂದಲೂ ಈ ಕಾರ್ಯಕ್ಕೆ ಮಾನ್ಯತೆಯನ್ನು ಕೊಡುತ್ತಾ ಬಂದಿದೆ. ಅದಕ್ಕೂ ಸಮಧಿಕವಾಗಿ ಜನರಲ್ಲಿ ಜ್ಞಾನಪ್ರಸಾರ ಮಾಡುವ ಕಾರ್ಯ ವನ್ನು ಕೈಗೊಳ್ಳುತ್ತದೆ, ಕೈಗೊಂಡಿದೆ. ಆ ಪೂಜೆಯಲ್ಲಿ ಜನ ಸಾಮಾನ್ಯರು ಭಾಗಿಗಳಾಗಬೇಕು. ಉಪನ್ಯಾಸಗಳಿಗೆ ಜನರು ಬಂದು ನೆರೆಯಬೇಕು, ತಮಗೆ ಬೇಕಾದ ವಿಷಯಗಳೇನೆಂಬುದನ್ನು ತಿಳಿಸ ಬೇಕು, ಪ್ರಚಾರೋಪನ್ಯಾಸ ಶಾಖೆಯ ಕಾರ್ಯದರ್ಶಿಗಳಿಗೆ ಕಾಗದ ಬರೆಯಬೇಕು. ಅವರಿಗೆ ಬರೆದರೆ ಅವರು ಜನರು ಕೇಳಿದ ಕಡೆ ಸಂತೋಷದಿಂದ ಉಪನ್ಯಾಸಗಳನ್ನು ಏರ್ಪಡಿಸುತ್ತಾರೆ. ತಾವು ತಿಳಿದುಕೊಳ್ಳಬೇಕೆಂದಿರುವ ವಿಷಯಗಳನ್ನು ಸೂಚಿಸಿದರೆ ಆಯಾ ವಿಷಯಗಳಲ್ಲಿ ತಜ್ಞರಾದವರನ್ನು ಕರೆದುಕೊಂಡು ಬಂದು, ಜನರಿಗೆ ಬೇಕಾದ ಮನರಂಜನೆಯ ವಿಷಯಗಳನ್ನೂ ವಿಜ್ಞಾನ ವಿಷಯ ಗಳನ್ನೂ ತಿಳಿಸಿಕೊಡುತ್ತಾರೆ.

ನಮ್ಮ ನಾಡಿನ ಬೆನ್ನು ಮೂಳೆಯಂತಿರುವ ರೈತಜನ ಸರ್ಕಾರಕ್ಕೆ ಕಂದಾಯವನ್ನು ಕೊಡುತ್ತಾರೆ. ಅದಕ್ಕೆ ಪ್ರತಿಫಲವಾಗಿ ಸರ್ಕಾರ ರಸ್ತೆ, ಬಾವಿ ಮೊದಲಾದ ಅನುಕೂಲ್ಯಗಳನ್ನು ಕಲ್ಪಿಸಿಕೊಡುತ್ತದೆ. ಇದಕ್ಕೂ ಹೆಚ್ಚಾಗಿ ವಿದ್ಯಾಭ್ಯಾಸದ ವ್ಯವಸ್ಥೆಯನ್ನು ಮಾಡಿಕೊಡು

ತ್ತದೆ. ಜನರು ಈ ಅನುಕೂಲ್ಯಗಳನ್ನು ಉಪಯೋಗಿಸಿಕೊಂಡು ವಿದ್ಯಾವಂತರಾಗಬೇಕು. "ವಿದ್ಯೆ" ಎನ್ನುವುದು ಸಾಮಾನ್ಯ ಮನುಷ್ಯನನ್ನು ಮೃಗತ್ವದಿಂದ ದೇವತ್ವಕ್ಕೆ ಎತ್ತುವ ಒಂದು ವಿಧಾನ. ನಮಗೆ ಅಂತಹ ವಿದ್ಯೆ ಬೇಕು—ಎಂದು ಹೇಳುವ ಕಾಲ ಈಗ ಬಂದಿದೆ. ಎಷ್ಟೇ ಹೈಸ್ಕೂಲುಗಳಿರಲಿ, ಏನೇ ಮಾಡಲಿ, ಸದ್ಯಕ್ಕೆ ನಮ್ಮ ದೇಶದಲ್ಲಿ ಎಲ್ಲರಿಗೂ ವಿಶ್ವವಿದ್ಯಾನಿಲಯಕ್ಕೆ ಪ್ರವೇಶ ದೊರೆಯುವುದೆಂದು ನಾನು ಹೇಳಲಾರೆ. ಪ್ರವೇಶ ಸಿಕ್ಕುವುದು ಇರಲಿ, ನಮ್ಮಲ್ಲಿ ಶೇ. ೮೦ರಷ್ಟು ಪ್ರಾಥಮಿಕ ವಿದ್ಯಾಭ್ಯಾಸದ ಕೊನೆಯಲ್ಲಿಯೇ ತಮ್ಮ ವಿದ್ಯಾಭ್ಯಾಸವನ್ನು ನಿಲ್ಲಿಸಿಬಿಡು ತ್ತಾರೆ. ಉಳಿದಿಪ್ಪತ್ತರಲ್ಲಿ ಅಷ್ಟು ಜನ ಮಾಧ್ಯಮಿಕ ಶಾಲೆಯ ಮಧ್ಯದಲ್ಲಿಯೋ ಕೊನೆಯಲ್ಲಿಯೋ ಕೈಬಿಡುತ್ತಾರೆ; ಹೈಸ್ಕೂಲು ವಿದ್ಯಾಭ್ಯಾಸವನ್ನು ಮುಗಿಸಿದೊಡನೆಯೇ ಮತ್ತಷ್ಟು ಜನ ಓದು ನಿಲ್ಲಿಸುತ್ತಾರೆ. ಹೀಗಾಗಿ ಕಾಲೇಜು ಮಟ್ಟಕ್ಕೆ ಬರಲು ಅರ್ಹತೆ ಪಡೆಯುವವರೇ ವಿರಳ. ಇವರಲ್ಲಿಯೂ ಎಷ್ಟೋ ಜನ ದೂರದ ಕಾರಣದಿಂದಲೋ, ಬಡತನದ ಕಾರಣದಿಂದಲೋ, ಮನೆಯ ಕ್ಲೇಶ ಸಂಕಟಗಳ ಕಾರಣದಿಂದಲೋ ವಿಶ್ವವಿದ್ಯಾನಿಲಯಕ್ಕೆ ಸೇರಲಾಗು ವುದಿಲ್ಲ. ಹೀಗೆ ದೇಶದ ಬಹು ಜನ ವಿಶ್ವವಿದ್ಯಾನಿಲಯವನ್ನು ಪ್ರವೇಶ ಮಾಡಿ, ಸಂಸ್ಕೃತಿ ವಿಜ್ಞಾನಗಳಲ್ಲಿ ಪರಿಣತರಾಗಲು ಸಾಧ್ಯವಿಲ್ಲ. ಅಂತಹವರಿಗೆ ವಿಶ್ವವಿದ್ಯಾನಿಲಯದ ಪ್ರಚಾ ರೋಪನ್ಯಾಸಗಳು ಜ್ಞಾನದೀವಿಗೆಗಳಾಗಬಲ್ಲವು.

ಅಜ್ಞರ ಮತ್ತು ಅನಕ್ಷರರ ಹೃದಯದಲ್ಲಿ ಜ್ಞಾನಜ್ಯೋತಿ ಹೊತ್ತುವಂತೆ ಮಾಡುವ ಕಾರ್ಯವೊಂದರಲ್ಲಿಯೇ ಇದು ಪರ್ಯವಸಾನ ವಾಗುವುದಿಲ್ಲ. ವಿಶ್ವವಿದ್ಯಾನಿಲಯದ ವಿದ್ಯೆ ಸಂಸ್ಕೃತಿಗಳನ್ನು ಪಡೆದು, ಹಿಂತಿರುಗಿ, ವಿವಿಧ ಕಾರ್ಯರಂಗಗಳಲ್ಲಿ ಪ್ರವೃತ್ತರಾಗಿರುವ

ವಿದ್ಯಾವಂತರಿಗೂ ಇದರಿಂದ ಪ್ರಯೋಜನವಾಗುತ್ತದೆ. ಮಾಸಿ ಹೋಗುವ ಅಥವಾ ಮರೆತುಹೋಗುವ ಸಂಸ್ಕಾರಗಳನ್ನು ಉದ್ದೀಪನಗೊಳಿಸಲು ಇದು ಸಹಾಯಕವಾಗುತ್ತದೆ.

**ಪ್ರಚಾರ ಪುಸ್ತಕಮಾಲೆ:** ಎಲ್ಲ ಪ್ರಚಾರೋಪನ್ಯಾಸಗಳನ್ನು ಎಲ್ಲರೂ ಕೇಳುವುದು ಸಾಧ್ಯವಿಲ್ಲ. ವಿಶ್ವವಿದ್ಯಾನಿಲಯಕ್ಕೆ ಎಷ್ಟೇ ಉತ್ಸಾಹವಿದ್ದರೂ ನಾಡಿನ ಪ್ರತಿಯೊಂದು ಹಳ್ಳಿಯಲ್ಲಿಯೂ ಉಪನ್ಯಾಸಗಳನ್ನು ಏರ್ಪಡಿಸುವುದು ಅಸಾಧ್ಯ. ಆದ್ದರಿಂದ, ಈ ಉಪನ್ಯಾಸಗಳನ್ನು ಕೇಳಲು ಸಾಧ್ಯವಿಲ್ಲದವರಿಗೂ ಇವುಗಳ ಪ್ರಯೋಜನವನ್ನು ಪಡೆಯಲು ಸಾಧ್ಯವಾಗುವಂತೆ ಸಣ್ಣ ಸಣ್ಣ ಕೈ ಹೊತ್ತಿಗೆಗಳ ರೂಪದಲ್ಲಿ ಅವುಗಳನ್ನು ಪ್ರಕಟಿಸಲಾಗುತ್ತಿದೆ. ಜ್ಞಾನದ ಬೇರೆ ಬೇರೆ ಶಾಖೆಯಲ್ಲಿ ತಜ್ಞರಾದವರು ಆಯಾ ಶಾಖೆಯಲ್ಲಿನ ಗಹನವಾದ ವಿಷಯಗಳನ್ನು ಎಲ್ಲರಿಗೂ ತಿಳಿಯುವಂತಹ ಸುಲಭವಾದ ಭಾಷೆಯಲ್ಲಿ ಉಪನ್ಯಾಸ ಮಾಡಿ, ಬರೆದುಕೊಡುತ್ತಾರೆ. ಇವುಗಳನ್ನು ಪುಸ್ತಕ ರೂಪದಲ್ಲಿ ಪ್ರಕಟಿಸಿ, ಅತ್ಯಂತ ಕಡಮೆಯ ಬೆಲೆಗೆ ಮಾರಲು ಏರ್ಪಡಿಸಲಾಗಿದೆ. ಮೊದಲು ಇವುಗಳ ಬೆಲೆ ಕೇವಲ ಎರಡಾಣೆ ಇತ್ತು; ಈಗ ಮೂರು ಅಥವಾ ನಾಲ್ಕಾಣೆ ಆಗಿರಬಹುದು. ಇವುಗಳ ಅಚ್ಚಿನ ವೆಚ್ಚ ಕೂಡ ಇವುಗಳ ವಿಕ್ರಯದಿಂದ ಹುಟ್ಟುವುದಿಲ್ಲ. ಇವುಗಳ ಉದ್ದೇಶ ದುಡ್ಡು ಮಾಡುವುದಲ್ಲ, ಜನತೆಯಲ್ಲಿ ಜ್ಞಾನ ಪ್ರಸಾರ ಮಾಡುವುದು. ಇಂತಹ ಸುಮಾರು ಎಂಬತ್ತು ಕೈಹೊತ್ತಿಗೆಗಳು "ಪ್ರಚಾರ ಪುಸ್ತಕ ಮಾಲೆ" ಯಲ್ಲಿ ಈಗ ಪ್ರಕಟವಾಗಿವೆ. ಇನ್ನೂ, ಸುಮಾರು ಇಪ್ಪತ್ತು ಪ್ರಕಟಣೆಗೆ ಸಿದ್ಧವಾಗಿವೆ. ಸಾಹಿತ್ಯ, ಸಮಾಜವಿಜ್ಞಾನ, ಭೌತವಿಜ್ಞಾನ, ರಸಾಯನವಿಜ್ಞಾನ, ವೈದ್ಯ, ಶಿಲ್ಪ, ನರ್ತನ— ಇತ್ಯಾದಿ ವಿವಿಧ ವಿಷಯಗಳನ್ನು ಕುರಿತ ಪುಸ್ತಕಗಳು ಈ ಮಾಲೆ

ಯಲ್ಲಿ ಬಂದಿವೆ. ಈ ಕೈ ಹೊತ್ತಿಗೆಗಳು ಅತ್ಯಂತ ಜನಪ್ರಿಯವಾಗಿದ್ದು ಲಕ್ಷಾಂತರ ಪುಸ್ತಕಗಳು ಈಗಾಗಲೇ ಮಾರಾಟವಾಗಿವೆ ; ಪ್ರತಿ ತಿಂಗಳಿನಲ್ಲಿಯೂ ಸಹಸ್ರಾರು ಪುಸ್ತಕಗಳು ಮಾರಾಟವಾಗುತ್ತಿವೆ. ಪ್ರಸಾರಾಂಗದ ಬಹುಮುಖವಾದ ಕಾರ್ಯದಲ್ಲಿ ಇದು ಬಹುಮುಖ್ಯ ವಾದುದೆಂದು ಹೇಳಬಹುದು.

## ೨. ವಿದ್ಯಾಭ್ಯಾಸ—ಅಂದು, ಇಂದು

ವಿದ್ಯೆಯ ಉದ್ದೇಶವೇನು? ಮಕ್ಕಳೇಕೆ ಓದಬೇಕು? ಎರಡು ಕಾರಣಗಳಿಗಾಗಿ. ಅವುಗಳಲ್ಲಿ ಒಂದು ಲೌಕಿಕೋದ್ದೇಶ. ಮತ್ತೊಂದು ಆಧ್ಯಾತ್ಮಿಕ ಉದ್ದೇಶ. ನಮ್ಮ ಹೊಟ್ಟೆ ಬಟ್ಟೆಗಳಿಗೆ ಸಂಪಾದನೆ ಮಾಡಿಕೊಂಡು ಜೀವನವನ್ನು ಸುಖಮಯವಾಗಿ ಮಾಡಿಕೊಳ್ಳ ಬೇಕೆಂಬ ಲೌಕಿಕೋದ್ದೇಶವೇ ಬಹುಜನರ ಆಶಯ. ಇದು ನ್ಯಾಯವೇ. ಹೊಟ್ಟೆಗೇ ಇಲ್ಲದವನು ಆತ್ಮವನ್ನೇನು ಸಾಧಿಸಿಯಾನು? ಆದ್ದರಿಂದ ಹೊಟ್ಟೆಗೆ ಬಟ್ಟೆಗೆ ಬೇಕು. ಆದರೆ ಅಷ್ಟೇ ಸಾಲದು. ಅನ್ನ ಬಟ್ಟೆಗಳನ್ನು ಸಂಪಾದಿಸುವುದು ಮಾತ್ರವೇ ವಿದ್ಯೆಯ ಗುರಿಯಲ್ಲ. ಅನ್ನ ಬಟ್ಟೆಗಳಿಂದ ಮನುಷ್ಯ ಬದುಕುತ್ತಾನೆ. ಆದರೆ ಅದು ಮನುಷ್ಯನ ಬದುಕಲ್ಲ. ಮೃಗದ ಬದುಕು. ಭಗವಂತ ಮಾನವನಲ್ಲಿ ಒಂದು ಚೇತನವನ್ನಿಟ್ಟಿದ್ದಾನೆ, ಆತ್ಮವನ್ನಿಟ್ಟಿದ್ದಾನೆ. ಅದು ಭಗವಂತನ ಕಡೆ ಮುಂದುವರಿದಂತೆಲ್ಲಾ ಬುದ್ಧಿಶಕ್ತಿ, ಹೃದಯಶಕ್ತಿ ಅಥವಾ ಭಾವಶಕ್ತಿ ವಿಕಾಸವಾಗುತ್ತಾ ಹೋಗುತ್ತದೆ. ಬುದ್ಧಿಶಕ್ತಿಯ ವಿಕಾಸದಿಂದ ತತ್ತ್ವ ಬೆಳೆಯುತ್ತದೆ ; ಭಾವಶಕ್ತಿಯ ವಿಕಾಸದಿಂದ ಕಾವ್ಯ ಮುಂದುವರಿಯುತ್ತದೆ. ಇದು

ಅತ್ಯಗತ್ಯವಾಗಿ ನಡೆಯುಬೇಕು. ಇಲ್ಲದಿದ್ದರೆ ಮನುಷ್ಯನು ಅಂದವಾಗಿ ಬಟ್ಟೆ ಹಾಕಿಕೊಂಡ ಪಶುವಾಗುತ್ತಾನೆ.

ನಮ್ಮ ನಾಗರಿಕತೆ ಬೆಳೆದಂತೆ ನಮ್ಮ ಆಧ್ಯಾತ್ಮಿಕತೆ ಅಥವಾ ಆತ್ಮಶ್ರೀಯೂ ಬೆಳೆಯಬೇಕು. ನಮ್ಮವರು ವಿದ್ಯೆಯನ್ನು ಕುರಿತ "ಸಾ ವಿದ್ಯಾ ಯಾ ವಿಮುಕ್ತಯೇ" ಎಂದು ಹೇಳಿದರು: ನಮ್ಮನ್ನು ಮುಕ್ತರನ್ನಾಗಿ ಮಾಡತಕ್ಕಂತಹುದು ಯಾವುದೋ ಅದೇ ವಿದ್ಯೆ. ಲೌಕಿಕವಿದ್ಯೆ ನಮ್ಮನ್ನು ಲೌಕಿಕದಾಹದಿಂದ ಮುಕ್ತರನ್ನಾಗಿ ಮಾಡುತ್ತದೆ; ಆಧ್ಯಾತ್ಮಿಕ ವಿದ್ಯೆ ನಮ್ಮ ಆತ್ಮ ತೃಷೆಯನ್ನು ಹಿಂಗಿಸುತ್ತದೆ. ಹೀಗೆ ವಿಜ್ಞಾನ, ಕಲೆ—ಎರಡೂ ನಮಗೆ ಬೇಕು. ಇಂದಿನವರೆಗೆ ವಿದ್ಯಾಭ್ಯಾಸ ಕ್ರಮದಲ್ಲಿ ಬರಿಯ ಕಲೆ ಅಥವಾ ವಿಜ್ಞಾನದ ಅಭ್ಯಾಸವನ್ನು ಮಾತ್ರ ಆಯ್ದುಕೊಳ್ಳ ಬೇಕಾಗಿತ್ತು. ಇದನ್ನು ಸರಿಪಡಿಸುವುದಕ್ಕಾಗಿ ಸಾಮಾನ್ಯವಿಜ್ಞಾನ ಮತ್ತು ಸಮಾಜವಿಜ್ಞಾನಗಳ ಬೋಧನೆಯನ್ನು ಬಳಕೆಗೆ ತರಲಾಗಿದೆ. ಇದರಿಂದ ವಿಜ್ಞಾನ ವಿಭಾಗದ ವಿದ್ಯಾರ್ಥಿಗಳು ಸಮಾಜವಿಜ್ಞಾನವನ್ನೂ, ಕಲಾವಿದ್ಯಾರ್ಥಿಗಳು ಸಾಮಾನ್ಯವಿಜ್ಞಾನ ವನ್ನೂ ಅಭ್ಯಸಿಸಿ ಅರಕೆಯಾದುದನ್ನು ಪರಿಪೂರ್ಣಗೊಳಿಸಿ ಕೊಳ್ಳಲು ಸಹಾಯಕವಾಗಿದೆ.

ಪರಿಪೂರ್ಣತೆಯನ್ನು ಪಡೆಯದ ಮನುಷ್ಯನು ಅಸುಖಿಯಾಗು ತ್ತಾನೆ. ಪ್ರಾಚೀನಕಾಲದ ಉಪನಿಷತ್ತಿನ ಋಷಿಯೊಬ್ಬನು 'ಅಂಧಂ ತಮಃ ಪ್ರವಿಶಂತಿ ಯೇ ಅವಿದ್ಯಾಂ ಉಪಾಸತೇ। ತತೋ ಭೂಯ ಇವ ತೇ ತಮೋ ಯ ಉ ವಿದ್ಯಾಯಾಂರತಾಃ' ಎಂದು ಹೇಳಿದ್ದಾನೆ. ಬರಿಯ ಅವಿದ್ಯೆಯನ್ನು ಉಪಾಸಿಸುವವನು ತಮಸ್ಸಿಗೆ ಇಳಿಯುತ್ತಾನೆ. ಯಾವನು ಬರಿಯ ವಿದ್ಯೆಯನ್ನು ಬೆಳೆಸಿಕೊಂಡು ಹೋಗುತ್ತಾನೆಯೋ ಅವನೂ ಕತ್ತಲೆಗೆ ಇಳಿಯು

ತ್ತಾನೆ. ವಿದ್ಯೆ ನಮ್ಮನ್ನು ಭಗವಂತನ ಕಡೆಗೆ ಕೊಂಡೊಯ್ಯುವುದು; ಅವಿದ್ಯೆ ಲೌಕಿಕ ಸುಖವನ್ನು ನೀಡುವುದು. ಅವಿದ್ಯೆಯನ್ನು ಸಂಪೂರ್ಣವಾಗಿ ಬಿಟ್ಟೇ ಬಿಡುತ್ತೇನೆಂದು ಬರಿಯ ವಿದ್ಯೆಯನ್ನೇ ಬೆನ್ನಟ್ಟುವವನು ಅವಿದ್ಯೆಯಿಂದ ಇಳಿಯುವುದಕ್ಕಿಂತಲೂ ಭಯಂಕರವಾದ ಕತ್ತಲೆಗೆ ಇಳಿಯುತ್ತಾನೆ. ಈ ಭೂಮಿ ನಮ್ಮ ಆತ್ಮದ ಸಾಧನರಂಗ. ಇಲ್ಲಿ ವಿದ್ಯೆ ಅವಿದ್ಯೆಗಳೆರಡನ್ನೂ ಅಭ್ಯಸಿಸ ಬೇಕು. ಪರಸ್ಪರ ವಿರುದ್ಧವಾಗದಂತೆ ಅವೆರಡನ್ನೂ ಸಮನ್ವಯ ಗೊಳಿಸಿಕೊಂಡವರು ಸುಖಿಯಾಗುತ್ತಾರೆ. ಆದ್ದರಿಂದ ನಮ್ಮ ವಿದ್ಯಾಸಂಸ್ಥೆಗಳು ಮಕ್ಕಳಲ್ಲಿ ಇವೆರಡೂ ಬೆಳೆಯುವಂತೆ ನೋಡಿ ಕೊಳ್ಳಬೇಕು. ಬೇರೆ ಸಂಸ್ಥೆಗಳಲ್ಲಿ ಆಧ್ಯಾತ್ಮಿಕಕ್ಕೆ ಅಷ್ಟು ಬೆಲೆ ಇಲ್ಲದಿರಬಹುದು. ವಿದ್ಯಾಸಂಸ್ಥೆಗಳಲ್ಲಿ ಮಾತ್ರ ಅದಕ್ಕೆ ಆಗತ್ಯ ವಾಗಿಯೂ ಬೆಲೆ ನೀಡಬೇಕು. ಆದರೆ, ಹಾಗೆ ಮಾಡುವಾಗ ಯಾವ ಸಂಕುಚಿತ ಭಾವನೆಯೂ ಸುಳಿಯಬಾರದು. ಇಲ್ಲಿ ಯಾವ ಒಂದು ಮತದ ತತ್ತ್ವಗಳನ್ನು ಬೋಧಿಸುವುದಲ್ಲ; ಎಲ್ಲ ಮತಗಳ ಉತ್ತಮಾಂಶಗಳನ್ನೂ ತೆಗೆದುಕೊಳ್ಳಬೇಕು. ಎಲ್ಲ ಗುರುಗಳು ಎಲ್ಲ ಪ್ರವಾದಿಗಳು ಎಲ್ಲ ಬೋಧಕರು ಹೇಗೆ ಸತ್ಯ, ಧರ್ಮ, ಸೌಂದರ್ಯದ ಕಡೆ ಮುಂದುವರಿದಿದ್ದಾರೆಂಬುದನ್ನು ತೋರಿಸಿ ಕೊಡಬೇಕು. ಹಾಗಾದಾಗ ಅನ್ಯಮತದ್ವೇಷ ಮತ್ತು ಸಂಕುಚಿತ ಭಾವನೆಗಳು ವಿನಷ್ಟವಾಗುತ್ತವೆ; ನಿಜವಾದ ಭಾರತೀಯ ದೃಷ್ಟಿ ಬೆಳೆದಂತಾಗುತ್ತದೆ. ಅಷ್ಟೇ ಅಲ್ಲ, ಪ್ರಪಂಚದ ದೃಷ್ಟಿಯೆಲ್ಲವೂ ಇತ್ತ ಬಾಗುತ್ತದೆ.

ಗ್ರಾಮಾಂತರದ ವಿದ್ಯಾಭ್ಯಾಸವನ್ನು ಕುರಿತು ಎರಡು ಮಾತು ಗಳನ್ನು ಆಡುವುದು ಇಲ್ಲಿ ಅಪ್ರಕೃತವಾಗಲಾರದು. ಈಗ ಕೆಲವು ಕಾಲದ ಹಿಂದೆ ಜಿಲ್ಲಾ ಕೇಂದ್ರಗಳಲ್ಲಿ ಮಾತ್ರ ಹೈಸ್ಕೂಲುಗಳಿದ್ದರೆ

ಹೆಚ್ಚು ಎನ್ನುವ ಸ್ಥಿತಿ ಇತ್ತು. ಕಾಲೇಜುಗಳಂತೂ ಬೆಂಗಳೂರು ಮೈಸೂರಿಗೇ ಮೀಸಲು. ಇವುಗಳಲ್ಲಿ ಓದುತ್ತಿದ್ದವರೆಂದರೆ ಪಟ್ಟಣಿಗರು, ಅದರಲ್ಲಿಯೂ ವಿರಾಮವಿದ್ದ ಶ್ರೀಮಂತರ ಅಥವಾ ಉತ್ತಮ ವರ್ಗದವರ ಮಕ್ಕಳು ಮಾತ್ರ. ಒಂದು ತರಗತಿಯಲ್ಲಿ ಹತ್ತು ಹದಿನೈದು ಜನರಿದ್ದರೆ ಹೆಚ್ಚು. ಉಪಾಧ್ಯಾಯರು ವಿದ್ಯಾರ್ಥಿಯ ಕಿವಿಹಿಂಡಿ, ಕಪಾಳಕ್ಕೆ ಹೊಡೆದು, ಬೆಂಚಿನ ಮೇಲೆ ನಿಲ್ಲಿಸಿ, ಸ್ಪೆಲ್ಲಿಂಗ್ ಉರು ಹೊಡೆಸಿ, ಡಿಕ್ಟೇಷನ್ನಿನ ತಪ್ಪುಗಳನ್ನೆಲ್ಲಾ ಇಂಪೊಸಿಷನ್ ಬರೆಸಿ, ಮನೆಯಲ್ಲಿ ಬಾಯಿಪಾಠ ಮಾಡುವಂತೆ ನಿರ್ಬಂಧಿಸಿ, ಕವಾಯತು ಕೊಟ್ಟು, ಸಾಮು ಮಾಡಿಸುತ್ತಿದ್ದರು. ಇಷ್ಟೆಲ್ಲಾ ಸಾಧನೆಯ ಫಲವಾಗಿ ವಿದ್ಯಾರ್ಥಿಗೆ ತಕ್ಕಮಟ್ಟಿನ ಇಂಗ್ಲಿಷ್ ಬರುತ್ತಿತ್ತು. ಲೋಯರ್ ಸೆಕೆಂಡರಿ ಪಾಸು ಮಾಡಿ ಹೈಸ್ಕೂಲಿನಲ್ಲಿ ಕಾಲಿಡುತ್ತಲೇ ದಪ್ಪದಪ್ಪನೆಯ ಇಂಗ್ಲಿಷ್ ಚರಿತ್ರೆ ಅಥವಾ ಇಂಗ್ಲಿಷ್‌ನ ಇತರ ಪಠ್ಯಪುಸ್ತಕಗಳು ವಿದ್ಯಾರ್ಥಿಯ ಕೈಗೆ ಬರುತ್ತಿದ್ದವು. ದಪ್ಪಪುಷ್ಟವಾದ ಆ ಪುಸ್ತಕಗಳನ್ನು ಕಂಡು ಅವನಿಗೆ ಖುಷಿಯೋ ಖುಷಿ. ಕನ್ನಡ ಪುಸ್ತಕಗಳು ಅಷ್ಟೇನೂ ಅಂದ ವಾಗಿಲ್ಲದೆ ಸೊಣಕಲಾಗಿರುತ್ತಿದ್ದವು. ಇದಕ್ಕೆ ತಕ್ಕಂತೆ ಕನ್ನಡ ಪಂಡಿತರು, ಇಂಗ್ಲಿಷ್ ಮೇಷ್ಟ್ರು, ಸೂಟು, ಬೂಟು, ಟೈ, ಕಾಲರ್ ಹಾಕಿಕೊಂಡು ಲಕ್ಷಣವಾಗಿರುತ್ತಿದ್ದರು. ಆದ್ದರಿಂದ ಇಂಗ್ಲಿಷ್ ಪುಸ್ತಕ, ಇಂಗ್ಲಿಷ್ ಮೇಷ್ಟರು ವಿದ್ಯಾರ್ಥಿಗಳ ಹೆಮ್ಮೆ ಯಾಗಿದ್ದರು.

ಇಂದು ಕಾಲ ಬದಲಾಯಿಸಿದೆ. ಹಳ್ಳಿಹಳ್ಳಿಗೂ ಹೈಸ್ಕೂಲು ಗಳಾಗಿವೆ. ಕಾಲೇಜುಗಳ ಸಂಖ್ಯೆಯೂ ಬೆಳೆಯುತ್ತಿದೆ. ಪ್ರತಿಯೊಂದು ಜಿಲ್ಲೆಗೂ ಒಂದೆರಡು ಕಾಲೇಜುಗಳಾದಂತಾಗಿದೆ. ಇತ್ತೀಚೆಗೆ ಮೈಸೂರು ವಿಶ್ವವಿದ್ಯಾನಿಲಯದ ಏಳು ಇಂಟರ್

ಮೀಡಿಯಂಟ್ ಕಾಲೇಜುಗಳನ್ನು ಅಪ್‌ಗ್ರೇಡ್ ಮಾಡುವ ವಿಚಾರ ಪತ್ರಿಕೆಗಳಲ್ಲಿ ಪ್ರಸ್ತಾಪಿತವಾಗಿರುವುದನ್ನು ನೀವು ಓದಿರಬಹುದು. ಸರ್ಕಾರದ ಮೇಲೆ ಒಂದು ಬಗೆಯ ಜುಲುಂ ಪ್ರಯೋಗಿಸುವಷ್ಟು ಆಕಾಂಕ್ಷೆ ಜನರಲ್ಲಿ ಕಂಡುಬರುತ್ತಿದೆ. ಕಾಲೇಜುಗಳಿಗೆ ಅಗತ್ಯವಾದ ಅನುಕೂಲ್ಯಗಳನ್ನೆಲ್ಲಾ ಸರ್ಕಾರದಿಂದ ನಿರೀಕ್ಷಿಸದೇ ತಾವೇ ಕಲ್ಪಿಸಿ ಕೊಳ್ಳಲು ಜನ ಸಿದ್ಧರಾಗಿದ್ದಾರೆ. ಹೀಗೆ ಜನ ಧೈರ್ಯವಾಗಿ ಮುಂದಡಿಯಿಟ್ಟರೆ ಕಾರ್ಯ ಸಿದ್ಧಿಯಾಗಿಯೇ ಆಗುತ್ತದೆ. ಇದರಲ್ಲಿ ಅಧೈರ್ಯ ಸಲ್ಲದು. ತನಗೆ ತಾನು ಸಹಾಯ ಮಾಡಿಕೊಳ್ಳು ವವನಿಗೆ ದೇವರು ಸಹಾಯ ಮಾಡುತ್ತಾನೆ. ತನ್ನ ಕಾಲಮೇಲೆ ತಾನು ನಡೆಯುವವನು ಬೀಳುವಂತಾದರೆ ಯಾರಾದರೂ ನೆರವು ನೀಡುತ್ತಾರೆ.

ಹೀಗೆ ಒಂದು ಕಡೆ ವಿದ್ಯಾಸಂಸ್ಥೆಗಳು ಹೆಚ್ಚುತ್ತಿವೆ. ಮತ್ತೊಂದು ಕಡೆ, ಇಂಗ್ಲಿಷಿನ ಮಟ್ಟ ಇಳಿದುಹೋಗಿದೆ. ಪಾಠ ಹೇಳುವ ಉಪಾಧ್ಯಾಯರೂ ಗ್ರೇಸ್ ಮಾರ್ಕ್ಸ್ ತೆಗೆದುಕೊಂಡು ಪಾಸು ಮಾಡಿದವರು. ಅವರಿಗೆ ಇಂಗ್ಲಿಷಿನಲ್ಲಿ ಸರಿಯಾಗಿ ಮಾತನಾಡುವುದಕ್ಕೂ ಬರದು, ಬರೆಯುವುದಕ್ಕೂ ಬರದು. ಪದ ಸಂಪತ್ತಿಗೇ ಅವರಲ್ಲಿ ಅಭಾವ. ಇಂತಹವರು ಎಕನಾಮಿಕ್ಸ್, ಪೊಲಿಟಿಕಲ್ ಸೈನ್ಸ್, ಫಿಲಾಸಫಿ, ಸೈಕಾಲಜಿ ಮೊದಲಾದ ಗಹನ ವಿಚಾರಗಳನ್ನು ಬೋಧಿಸುವುದೇನು? ಇವರಿಂದ ಕಲಿತ ಮಕ್ಕಳನ್ನು ಪರೀಕ್ಷೆಯಲ್ಲಿ ಉತ್ತೀರ್ಣರಾಗುವಂತೆ ನಿರೀಕ್ಷಿಸಿದಾಗ ಏನಾಗ ಬಹುದು? ಭಾಷೆಯಲ್ಲಿ ಪ್ರಭುತ್ವವಿಲ್ಲದ ಮಕ್ಕಳು ಸ್ವತಂತ್ರವಾಗಿ ಬರೆಯಲು ಸಾಧ್ಯವೆ? ಇಂಗ್ಲಿಷಿನಲ್ಲಿ ಒಂದು ಪತ್ರವನ್ನು ಸರಿಯಾಗಿ ಬರೆಯಲು ತಿಳಿಯದ, ಕ್ರಿಯಾಪದವನ್ನು ಎಲ್ಲಿ ಹಾಕಬೇಕೆಂದು ತಿಳಿಯದ, ವಿದ್ಯಾರ್ಥಿಗಳು ಗಹನವಾದ ವಿಚಾರಗಳನ್ನು ಬರೆಯ

ತೊಡಗಿದರೆ ಉತ್ತರ ಯಾವ ಮಟ್ಟದಲ್ಲಿದ್ದೀತು? ಅವರು ಇತರರಿಂದ ಪ್ರಬಂಧಗಳನ್ನು ಬರೆಸಿಕೊಂಡು ಉರುಹೊಡೆಯುತ್ತಾರೆ; ಅದನ್ನು ಬತ್ತಳಿಕೆಯಲ್ಲಿ ಇಟ್ಟುಕೊಂಡು ಪರೀಕ್ಷೆಯ ರಣಾಂಗಣಕ್ಕೆ ನುಗ್ಗುತ್ತಾರೆ. ನಿರೀಕ್ಷಿಸಿದ ಪ್ರಶ್ನೆಗಳೇ ಬಂದರೆ ಸರಿಯಾಗಿ ಬರೆಯುತ್ತಾರೆ: ಇಲ್ಲದಿದ್ದರೆ ಇಲ್ಲ. ಅಥವಾ ಪ್ರಶ್ನೆ ಏನೇ ಇರಲಿ, ತಮಗೆ ಗೊತ್ತಿರುವ ಉತ್ತರವನ್ನೇ ಬರೆಯುತ್ತಾರೆ!

ಈ ದುಃಸ್ಥಿತಿಯನ್ನು ಗಮನಿಸಿ ಈಗ ಕೆಲವು ವರ್ಷಗಳ ಹಿಂದೆ ನಮ್ಮ ಸಂಸ್ಥಾನದ ಹೈಸ್ಕೂಲುಗಳಲ್ಲಿ ಕನ್ನಡ ಮಾಧ್ಯಮವನ್ನು ಬಳಕೆಗೆ ತಂದರು. ಆಗ "ಎಲ್ಲವನ್ನೂ ಕನ್ನಡದಲ್ಲಿ ಬೋಧಿಸುವುದು ಸಾಧ್ಯವೆ? ಕನ್ನಡದಲ್ಲಿ ಪಠ್ಯಪುಸ್ತಕಗಳೆಲ್ಲಿವೆ?'' ಎಂಬ ದೊಡ್ಡ ಕೂಗೆದ್ದಿತು. ಈಗ ಪಠ್ಯಪುಸ್ತಕಗಳು ರಾಶಿರಾಶಿಯಾಗಿ ಬರುತ್ತಿವೆ; ಪಾಠಗಳನ್ನು ಕನ್ನಡದಲ್ಲಿ ಹೇಳಿಕೊಡುತ್ತಿದ್ದಾರೆ; ಅದು ಸಮರ್ಪಕವಾಗಿ ನಡೆದುಕೊಂಡು ಬರುತ್ತಿದೆ. ಈ ಪದ್ಧತಿ ಶಿಕ್ಷಣತತ್ತ್ವಕ್ಕೆ ಅನುಸಾರವಾಗಿಯೂ ಇದೆ. ನಾವು ಯಾವ ಭಾಷೆಯಲ್ಲಿ ಹುಟ್ಟಿ ಬೆಳೆದಿದ್ದೇವೆಯೋ ಅದರಲ್ಲಿ ನಮಗೆ ಪ್ರಭುತ್ವ ಬರುವಂತೆ, ವಿಷಯಗಳು ಸ್ಪಷ್ಟವಾಗಿ ಗೋಚರಿಸುವಂತೆ, ಅನ್ಯಭಾಷೆಯಲ್ಲಿ ಗೋಚರಿಸುವುದಿಲ್ಲ. ಸ್ವತಂತ್ರವಾದ ಆಲೋಚನೆ ಪರಭಾಷೆಯಲ್ಲಿ ಸಾಧ್ಯವಿಲ್ಲ. ಈಗ ವಿಜ್ಞಾನ ವಿಷಯವನ್ನು ತೆಗೆದುಕೊಳ್ಳೋಣ. ನಮ್ಮ ದೇಶದಲ್ಲಿ ಇಷ್ಟೊಂದು ಕೋಟಿ ಕೋಟಿ ಜನ ಇನ್ನೂರು ವರ್ಷಗಳಿಂದ ಇಂಗ್ಲಿಷ್ ವಿದ್ಯಾಭ್ಯಾಸ ಮಾಡುತ್ತಿದ್ದರೂ, ಎಲ್ಲೋ ಒಬ್ಬ ಸಿ.ವಿ. ರಾಮನ್, ಒಬ್ಬ ಪಿ.ಸಿ. ರಾಯ್ ಎಂದು ಒಂದೆರಡು ಹೆಸರುಗಳನ್ನು ಮಾತ್ರ ಹೇಳಬಹುದಾಗಿದೆ. ಇದು ಶುದ್ಧ ಅಪಮಾನಕರ. ಎಲ್ಲಿಯವರೆಗೆ ನಾವು ಅನ್ಯಭಾಷೆಯಲ್ಲಿ ಜ್ಞಾನ ಬೋಧೆಯನ್ನು ನಡೆಸುತ್ತಾ ಹೋಗುತ್ತೇವೆಯೋ ಅಲ್ಲಿಯವರೆಗೆ

ನಾವು ಅನ್ಯರು ಹೇಳಿದುದನ್ನು ತೆಗೆದುಕೊಂಡು ಬಳಸಬಲ್ಲೆವೇ ಹೊರತು ಹೊಸದನ್ನು ಸೃಷ್ಟಿ ಮಾಡುವುದು ಕಷ್ಟಸಾಧ್ಯ ವಾಗುತ್ತದೆ.

## ೩. ಕನ್ನಡ ಮಾಧ್ಯಮ

ಸ್ವಾತಂತ್ರ್ಯಪೂರ್ವದಲ್ಲಿ ಇಂಗ್ಲಿಷಿಗಿದ್ದ ಸ್ಥಾನ ಈಗ ಸಂಪೂರ್ಣ ವಾಗಿ ಬದಲಾವಣೆ ಹೊಂದಿದೆ. ಹಿಂದೆ ದೇಶ ಭಾಷೆಗಳು ಅವನತ ಮತ್ತು ಅವಮಾನಿತ ಸ್ಥಿತಿಯಲ್ಲಿದ್ದುವು. ಆದರೆ ಈಗ ಮೂವತ್ತು ವರ್ಷಗಳಲ್ಲಿ ಕಾಲ ಬದಲಾಯಿಸಿದೆ. ಪ್ರಥಮ ವರ್ಗಕ್ಕೆ ಸೇರಿದ ಕೃತಿಗಳು ಕನ್ನಡದಲ್ಲಿ ಮೂಡಿವೆ. ಇತರ ಭಾಷೆ ಗಳಲ್ಲಿ ಏನಾಗಿದೆ ಎನ್ನುವುದನ್ನು ಅಧಿಕಾರವಾಣಿಯಿಂದ ಮಾತ ನಾಡುವುದು ಕಷ್ಟ. ಸಾಹಿತ್ಯ ಅಕ್ಯಾಡೆಮಿಯವರು ಪ್ರಕಟಿಸಿರುವ Contemporary Literature ಎಂಬ ಪುಸ್ತಕ ಭಾರತದ ಇತರ ದೇಶಭಾಷೆಗಳು ಸಾಧಿಸಿರುವ ಪ್ರಗತಿ ಅಲ್ಪವಾದುದಲ್ಲ—ಎಂದು ತಿಳಿಸುತ್ತದೆ. ಕನ್ನಡದ ವಿಚಾರವನ್ನು ಮಾತ್ರವೇ ಕುರಿತು ಹೇಳುವುದಾದರೆ, ಎಂತಹ ಕ್ಲಿಷ್ಟ ವಿಷಯವೇ ಆಗಿರಲಿ, ಎಷ್ಟು ಸೂಕ್ಷ್ಮವಾದುದೇ ಆಗಿರಲಿ ಅದನ್ನು ಸ್ಪಷ್ಟವಾಗಿ ವಿವರಿಸುವಷ್ಟು ನಮ್ಮ ಭಾಷೆ ಇಂದು ಪರಿಪುಷ್ಟವಾಗಿದೆ. ಆದ್ದರಿಂದ ಕನ್ನಡದ ಮೂಲಕ ಪಾಠ ಹೇಳುವುದೂ ಸಾಧ್ಯ, ಕಲಿಯುವುದೂ ಸಾಧ್ಯ.

ಇದನ್ನು ಇನ್ನೊಂದು ದೃಷ್ಟಿಯಿಂದಲೂ ಗಮನಿಸಬೇಕು. ಹಿಂದೆ ಹತ್ತು ಜನ ಓದುತ್ತಿದ್ದ ಕಡೆ ಇಂದು ನೂರು ಜನ ಓದುತ್ತಿದ್ದಾರೆ. ಶತಮಾನಗಳಿಂದ ವಿದ್ಯೆ, ಅಕ್ಷರ, ಸಂಸ್ಕೃತಿ

ಎಂಬುದನ್ನು ಮೂಸಿ ಕೂಡ ನೋಡದೆ ಇರುವ ಮನೆತನಗಳಿಂದ ಬಂದ ಮಕ್ಕಳು ಇಂದು ಶಾಲೆಯಲ್ಲಿ ವಿದ್ಯಾಭ್ಯಾಸ ಮಾಡುತ್ತಿದ್ದಾರೆ. ಈ ಮಕ್ಕಳಿಗೆ ಶ್ರೀಮಂತರ ಅಥವಾ ವಿದ್ಯಾವಂತರ ಮಕ್ಕಳಿಗಿರುವ Private tuition ಅಥವಾ ಮನೆಯ ಪಾಠದ ಸೌಲಭ್ಯವಿಲ್ಲ, ಉತ್ತಮ ಆರ್ಥಿಕ ಸಾಮರ್ಥ್ಯವನ್ನು ಪಡೆಯುವ ಅನುಕೂಲಗಳಿಲ್ಲ, ಮನೆಯಲ್ಲಿ ಸಂಸ್ಕೃತಿಯ ವಾತಾವರಣವೂ ಇಲ್ಲ. ಇಂತಹ ಲಕ್ಷಾಂತರ ಮಕ್ಕಳು ವಿದ್ಯಾಭ್ಯಾಸ ಮಾಡಬೇಕಾಗಿದೆ, ಅವರಿಗೆ ಇಂಗ್ಲಿಷ್ ಗಂಧವೇ ಗೊತ್ತಿಲ್ಲ. ಉಪಾಧ್ಯಾಯರಾದವರು ಕನ್ನಡದಲ್ಲಿಯಾದರೂ ವಿವರಿಸಿ ಪಾಠ ಹೇಳುತ್ತಾರೆಯೇ ? ಇಲ್ಲ. ಕನ್ನಡದಲ್ಲಿ ಪಾಠ ಹೇಳಿದರೆ ಕೆಲವರು ತಮ್ಮ ಘನತೆಗೆ ಧಕ್ಕೆಯಾಗುವುದೆಂದು ಭಾವಿಸುವವರಿದ್ದಾರೆ. ಈ ಸ್ಥಿತಿಯಲ್ಲಿ ಮಕ್ಕಳಿಗೆ ಆಗುತ್ತಿರುವ ನಷ್ಟವನ್ನು ಯಾರೂ ಗಮನಿಸುತ್ತಿಲ್ಲ.

ವಿಶ್ವವಿದ್ಯಾನಿಲಯದ ಪರೀಕ್ಷೆಗಳ ಪರಿಚಯವಿರುವವರು ಇಂಗ್ಲಿಷ್ ಮಾಧ್ಯಮದಿಂದ ಆಗುತ್ತಿರುವ ಅನ್ಯಾಯವನ್ನು ಸ್ಪಷ್ಟವಾಗಿ ಮನಗಂಡಿರುತ್ತಾರೆ. ವಿದ್ಯಾರ್ಥಿಗಳ ಉತ್ತರಪತ್ರಿಕೆಗಳನ್ನು ತೆಗೆದು ನೋಡಿ, ಅಧ್ಯಾಪಕರಾದವರು ಮರುಭೂಮಿಯಲ್ಲಿ ನೀರನ್ನು ಹುಡುಕುವಂತೆ ಸ್ವಲ್ಪ ಆಧಾರ ಸಿಕ್ಕಿದರೂ ಸಾಕು, ನಂಬರು ಕೊಡೋಣವೆಂದು ಹೊರಟರೂ ಅವರಿಗೆ ಹತಾಶೆ. ಅಧ್ಯಾಪಕರು ಎಷ್ಟು ಉದಾರಿಗಳಾದರೂ ಶೇಕಡಾ ಇಪ್ಪತ್ತು ಮಂದಿ ವಿದ್ಯಾರ್ಥಿಗಳು ತೇರ್ಗಡೆಯಾಗುವುದೂ ಸಾಧ್ಯವಿಲ್ಲ. ಗ್ರೇಸ್ ಅಂಕಗಳ ಕೃಪೆಯಿಂದ ಶೇಕಡಾ ಇಪ್ಪತ್ತು ಮಂದಿ ಕಷ್ಟದಿಂದ ತೇರ್ಗಡೆಯಾಗಿ ವಿಶ್ವವಿದ್ಯಾನಿಲಯಕ್ಕೆ ಬರುತ್ತಾರೆ. ಅನೇಕ ವಿದ್ಯಾರ್ಥಿಗಳು ಕನ್ನಡ, ಚರಿತ್ರೆ, ಗಣಿತ ಇತ್ಯಾದಿ ಬೇರೆ

ವಿಷಯಗಳಲ್ಲಿ ೫೦%, ೬೦%, ಅಂಕಗಳನ್ನು ತೆಗೆಯುವವರು ಇಂಗ್ಲಿಷಿನಲ್ಲಿ ೧೫% ಅಂಕಗಳನ್ನು ಪಡೆಯುವುದೂ ಕಷ್ಟವಾಗಿರುತ್ತದೆ. ಈ ಸ್ಥಿತಿಯಲ್ಲಿಯೇ ಬಿಟ್ಟರೆ ತೇರ್ಗಡೆಯಾಗುವವರ ಸಂಖ್ಯೆ ಅತಿ ಕಡಮೆಯಾಗುತ್ತದೆ ; ಮಾನವ ಶಕ್ತಿ ಅಪಾರವಾಗಿ ದುರ್ವ್ಯಯವಾದಂತಾಗುತ್ತದೆ.

ಈ ವಿಚಾರಗಳನ್ನು ಪರಿಶೀಲಿಸಿ, ಇಂಗ್ಲಿಷ್ ಎಲ್ಲರಿಗೂ ಆವಶ್ಯಕವೆ ? ಎಂಬುದನ್ನು ನಿರ್ಣಯ ಮಾಡಬೇಕು. ನಮ್ಮ ಕರ್ಣಾಟಕದಲ್ಲಿ ಎಷ್ಟು ಮಂದಿ ವಿದ್ಯಾರ್ಥಿಗಳು ಅಖಿಲ ಭಾರತ ರಂಗಕ್ಕೆ ಹೋಗುತ್ತಾರೆ? ಎಷ್ಟು ಮಂದಿ ವಿದ್ಯಾರ್ಥಿಗಳು ಅಂತರ ರಾಷ್ಟ್ರೀಯ ರಂಗಕ್ಕೆ ಪ್ರವೇಶಿಸುತ್ತಾರೆ? ಎಂಬ ವಿಚಾರವನ್ನು ಮನನ ಮಾಡಬೇಕು. ಅಖಿಲ ಭಾರತೀಯ ರಂಗಕ್ಕೆ ಪ್ರವೇಶಿಸುವವರಿಗೆ ಇಂಗ್ಲಿಷ್ ಬೇಕು. ಅಂತಹ ವಿದ್ಯಾರ್ಥಿಗಳ ಪ್ರಮಾಣ ಎಷ್ಟು? ಅಂತರರಾಷ್ಟ್ರೀಯ ಸ್ಥಾನಮಾನಗಳಲ್ಲಿ ರಾಜಕೀಯ, ವೈಜ್ಞಾನಿಕ ಇತ್ಯಾದಿ ಶಾಖೆಗಳಿಗೆ ಪ್ರವೇಶಿಸುವವರಿಗೆ ಇಂಗ್ಲಿಷ್ ಭಾಷೆಯ ಜ್ಞಾನ ಆವಶ್ಯಕ. ಇನ್ನು ಕರ್ಣಾಟಕದಲ್ಲಿಯೇ ಇದ್ದು ತಮ್ಮ ಜೀವನವನ್ನು ರೂಪಿಸಿಕೊಳ್ಳುವವರೂ ಇದ್ದಾರೆ. ಈ ಮೂರು ಭಾಗದ ವಿದ್ಯಾರ್ಥಿಗಳನ್ನು ವಿಭಾಗ ಮಾಡಿಕೊಂಡು ಯಾರು ಯಾರಿಗೆ ಎಷ್ಟು ಇಂಗ್ಲಿಷ್ ಬೇಕು ಎಂಬುದನ್ನು ನಿಷ್ಕರ್ಷಿಸಬೇಕು.

ನಮ್ಮಲ್ಲಿ ಬಹು ಜನರಿಗೆ ಓದಿ ವಿಷಯವನ್ನು ತಿಳಿದುಕೊಳ್ಳುವಷ್ಟು ಇಂಗ್ಲಿಷ್ ಬಂದರೆ ಸಾಕು. ಅದಕ್ಕಿಂತ ಕಡಿಮೆ ಸಂಖ್ಯೆಯ ಜನರಿಗೆ ಇಂಗ್ಲಿಷ್ ಮಾತನಾಡುವ, ಓದುವ ಜ್ಞಾನ ಬೇಕು. ಅದಕ್ಕಿಂತಲೂ ಕಡಿಮೆ ಸಂಖ್ಯೆಯ ಜನರಿಗೆ ಇಂಗ್ಲಿಷ್ ಮಾತನಾಡುವ, ಓದುವ, ಬರೆಯುವ ಜ್ಞಾನ ಬೇಕು. ನಮ್ಮ

ದೇಶದಲ್ಲಿ ಅನೇಕರಿಗೆ ವಿಷಯ ಪರಿಜ್ಞಾನಕ್ಕಾಗಿ ಇಂಗ್ಲಿಷ್ ಭಾಷೆಯನ್ನು ಓದಿ ಅರ್ಥಮಾಡಿಕೊಳ್ಳುವಷ್ಟು ಜ್ಞಾನವಿದ್ದರೆ ಸಾಕು.

ಒಬ್ಬ 'ಎಂಜಿನಿಯರ್', ಒಬ್ಬ 'ಮೆಡಿಕಲ್‌ಮ್ಯಾನ್' ಇವರಿಗೆ ಭಾಷಾಜ್ಞಾನ ಬೇಕು. ಹಾಗೆಯೇ ಒಬ್ಬ ಮಂತ್ರಿಯಾಗುವವನಿಗೂ ಭಾಷಾಜ್ಞಾನ ಬೇಕು. ಎಂಜನಿಯರ್ ಅಥವಾ ಮೆಡಿಕಲ್ ಮ್ಯಾನ್ ಆಗುವವನು ಶೇಕ್ಸ್‌ಪಿಯರ್, ಕೀಟ್ಸ್, ಮಿಲ್ಟನ್, ವರ್ಡ್ಸ್‌ವರ್ತ್, ಮಿಸ್ಟಿಸಿಸಂ ಆಫ್ ಕೋಲ್‌ರಿಡ್ಜ್ (Mysticism of Coleridge)—ಈ ವಿಚಾರಗಳಲ್ಲಿ ಇಂಗ್ಲಿಷಿನಲ್ಲಿ ಪ್ರಬಂಧ ಬರೆಯಲಿಲ್ಲವೆಂದು ಐದು ವರ್ಷ ಫೇಲ್ ಮಾಡಿಸಿದರೆ ದೇಶಕ್ಕೆ ದೊಡ್ಡ ನಷ್ಟ. "ನಿಮ್ಮ ಇಂಗ್ಲಿಷ್ ತಂಟೆಗೆ ಬರೋದಿಲ್ಲ, ನಾನು ಪಾಲಿಟೆಕ್ನಿಕ್ಕಿಗೊ (Polytechnic) ಪಾಲಿಟಿಕ್ಸಿಗೊ (Politics) ಹೋಗುತ್ತೇನೆ, ಬಿಟ್ಟುಬಿಡಿ" ಎಂದರೆ ನಾವು ಬಿಡುವುದಿಲ್ಲ. "ಇಲ್ಲ, ಮಿಸ್ಟಿಸಿಸಂ ಆಫ್ ಕೋಲ್‌ರಿಡ್ಜ್ ಬರೆದ ಹೊರತು ಬಿಡುವುದಿಲ್ಲ" ಎಂದರೆ ಅವನು ಎಷ್ಟು ಪ್ರಯತ್ನ ಮಾಡಿದರೂ ಏನೂ ಪ್ರಯೋಜನವಿಲ್ಲ. "ನಾನು ಏತಕ್ಕೂ ಪ್ರಯೋಜನ ವಿಲ್ಲದವನು" ಎಂದು ನಿರಾಶೆಗೊಳ್ಳುತ್ತಾನೆ. ಈ ರೀತಿಯಾದ ಕಷ್ಟಕ್ಕೆ ಅವಕಾಶ ಕೊಡದಂತೆ ನೋಡಿಕೊಳ್ಳಬೇಕಾದುದು ಅತ್ಯಂತ ಆವಶ್ಯಕ. ನಾಳೆಯ ದಿನ ಎಂಜನಿಯರ್ ಆಗಲು ಹೋಗುವ ವನಿಗೆ Mysticism of Coleridge ಅಥವಾ The Character of Hamlet ತಿಳಿಯದಿದ್ದರೂ ಕ್ಷಮಿಸಬೇಕಾಗುತ್ತದೆ. ಯಂತ್ರ, ಶಿಲ್ಪ, ವೈದ್ಯ ಶಾಖೆಗಳಲ್ಲಿ ಪರಿಣತರಾಗುವ ವಿದ್ಯಾರ್ಥಿಗಳಿಗೆ ಇಂಗ್ಲಿಷನ್ನು ಭಾಷೆಗೋಸ್ಕರವಾಗಿಯೇ ಕಲಿಸಬೇಕು. ಸಾಹಿತ್ಯದಲ್ಲಿ ಅಭಿರುಚಿ ಇಲ್ಲದವನನ್ನು ಸಾಹಿತ್ಯದ ಕಡೆಗೆ ಬರಬೇಡವೆಂದು ಹೇಳಿ ಕಳುಹಿಸಬೇಕು.

ಇಂತಾದರೆ ವಿದ್ಯಾರ್ಥಿಗೆ ಸಾಹಿತ್ಯದ ಗಂಧವೇ ಬೇಡವೆ? ಎಂದು ಪ್ರಶ್ನಿಸಬಹುದು. ಈ ಕಾರ್ಯವನ್ನು ಇನ್ನುಮುಂದೆ ಕನ್ನಡಕ್ಕೆ ಬಿಟ್ಟುಬಿಡಿ. ಅತ್ಯುನ್ನತ ಸಾಹಿತ್ಯ ಕೃತಿಗಳು, ಅತ್ಯಂತ ಗಹನವಾದ ಆಲೋಚನಾ ವಿಚಾರಗಳು, ಇವುಗಳೆಲ್ಲ ಈಗಾಗಲೇ ಕನ್ನಡದಲ್ಲಿ ಮೈದೋರಿವೆ. ಇಂಗ್ಲಿಷ್ ಸಾಹಿತ್ಯಕ್ಕೆ ಸರಿಸಾಟಿಯಾಗಿ ಗಮನಾರ್ಹ ಪ್ರಮಾಣದಲ್ಲಿ ಒದಗಿಸಿದೆ, ಮುಂದೆ ಒದಗಿಸುತ್ತದೆ. ಕನ್ನಡವು ಒದಗಿಸುವಷ್ಟು ಹೃದಯಸ್ಪರ್ಶಿಯಾಗಿ ಇಂಗ್ಲಿಷ್ ಒದಗಿಸಲಾರದು. ಭಾವಪುಷ್ಟಿ ಬುದ್ಧಿಪುಷ್ಟಿಗಳನ್ನು ಪಡೆಯಲು ಕನ್ನಡವಿದೆ, ಸಂಸ್ಕೃತವಿದೆ. ಈಗ ಇಂಗ್ಲಿಷಿನ ಉತ್ತಮ ಕೃತಿಗಳು ಕನ್ನಡಕ್ಕೆ ಬಂದಿವೆ, ಮುಂದೆ ಇನ್ನೂ ಬರುತ್ತವೆ. ಇಂಗ್ಲಿಷ್ ಭಾಷೆಯನ್ನು ಕಲಿತ ಮೇಲೆ ಇಂಗ್ಲಿಷ್ ಸಾಹಿತ್ಯದ ಪುಷ್ಟಿ ಶಕ್ತಿಗಳನ್ನು ಕನ್ನಡದ ಭಾಷಾಂತರಗಳ ಮೂಲಕ ಪಡೆಯುವುದು ಸಾಧ್ಯ. ಈಗ ಫ್ರಾನ್ಸ್ ದೇಶದಲ್ಲಿ ಶೇಕ್ಸ್‌ಪಿಯರ್ ಕೃತಿಗಳನ್ನು ಇಂಗ್ಲಿಷಿನಲ್ಲಿ ಓದಿ ಫ್ರೆಂಚ್ ಭಾಷೆಯಲ್ಲಿ ವಿವರಿಸುತ್ತಾರೆ. ಇನ್ನು ಮುಂದೆ ಇಂಗ್ಲಿಷ್ ಪುಸ್ತಕಗಳನ್ನು ಕನ್ನಡದಲ್ಲಿಯೇ ಪಾಠ ಹೇಳಬೇಕು. ನಮ್ಮಲ್ಲಿ ಸಾಹಿತ್ಯಕ್ಕೋಸ್ಕರ ಕನ್ನಡ ಆನರ್ಸ್ ಮತ್ತು ಸಂಸ್ಕೃತ ಆನರ್ಸ್ ತರಗತಿಗಳಲ್ಲಿ ವ್ಯಾಸಂಗ ಮಾಡುವ ವಿದ್ಯಾರ್ಥಿಗಳು ಇಂಗ್ಲಿಷ್ ಸಾಹಿತ್ಯವನ್ನು ಚೆನ್ನಾಗಿ ಅಭ್ಯಾಸ ಮಾಡಬೇಕು. ಅವರು ಶೇಕ್ಸ್‌ಪಿಯರ್, ಮಿಲ್ಟನ್, ವರ್ಡ್ಸ್‌ವರ್ತ್ ಮೊದಲಾದ ಕವಿಗಳನ್ನು ಚೆನ್ನಾಗಿ ಅಭ್ಯಾಸ ಮಾಡಿ, ನಿಷ್ಕೃಷ್ಟವಾದ ಜ್ಞಾನವನ್ನು ಪಡೆಯಲಿ. ಆದರೆ ಇಂಗ್ಲಿಷನ್ನು ಕನ್ನಡದಲ್ಲಿ ಬೋಧಿಸಬೇಕು. ಪರೀಕ್ಷೆಯಲ್ಲಿ ಉತ್ತರಗಳನ್ನು ಕನ್ನಡದಲ್ಲಿ ಬರೆಯಬೇಕು. ಇದರಿಂದ ದೇಶಕ್ಕೆ ಕ್ಷೇಮ. ಸಹಸ್ರಾರು ವಿದ್ಯಾರ್ಥಿಗಳ ಶ್ರೇಯಸ್ಸೂ ಆಗುತ್ತದೆ.

ನಮ್ಮ ದೇಶದಲ್ಲಿ ಇಂಗ್ಲಿಷ್ ಬೇಡವೇ ಬೇಡ—ಎಂದು ಹೇಳುವವರು ಕೆಲವರಿದ್ದಾರೆ; ದೇಶಭಾಷೆಗಳೇ ಬೇಡ, ಇಂಗ್ಲಿಷಿರಲಿ —ಎಂದು ಹೇಳುವವರೂ ಇದ್ದಾರೆ. ಈ ಎರಡು ತೀವ್ರ ಭಾವನೆಗಳನ್ನು ದೂರಮಾಡಿ, ಯಾವ ಮಾರ್ಗವನ್ನು ಕೈಕೊಂಡರೆ ನಮ್ಮ ದೇಶಕ್ಕೆ ಕ್ಷೇಮವೋ, ಸಹಾಯವೋ ಆ ಮಾರ್ಗವನ್ನು ನಿಶ್ಚಯಿಸಬೇಕು—ನಮಗೆ ಬೇಕಾದುದು ಇಂಗ್ಲಿಷ್ ಸಾಹಿತ್ಯದ ಪುಷ್ಟಿ, ಶಕ್ತಿ. ಅದನ್ನು ಪಡೆಯಲು ಇಂಗ್ಲಿಷ್ ಪಾಠಗಳನ್ನು ಕನ್ನಡದಲ್ಲಿ ಬೋಧಿಸಬೇಕು. ಪರೀಕ್ಷೆಯಲ್ಲಿ ಉತ್ತರವನ್ನು ಕನ್ನಡದಲ್ಲಿ ಬರೆಯಬೇಕು. ಇದರಿಂದ ದೇಶದ ಕಲ್ಯಾಣವಾಗುತ್ತದೆ. ಇಂಗ್ಲಿಷ್ ಕವಿಗಳೂ ಸಾಹಿತಿಗಳೂ ಹೆಚ್ಚು ಆತ್ಮೀಯರಾಗಿ ನಮ್ಮ ಬಳಿಗೆ ಬರುತ್ತಾರೆ. ಯಾವ ಪೂರ್ವಾಭಿಪ್ರಾಯಗಳನ್ನೂ ಇಟ್ಟು ಕೊಳ್ಳದೆ ಶಿಕ್ಷಣತಜ್ಞರು ನಿರ್ಮಲ ಹೃದಯದಿಂದ ಈ ವಿಚಾರ ಗಳನ್ನು ಮನನ ಮಾಡಬೇಕು. ಇಂಗ್ಲಿಷನ್ನು ದೊಡ್ಡ ಚಿನ್ನದ ಕಡಾಯಿಯೆಂದೇ ಭಾವಿಸೋಣ. ಅದರ ತುಂಬ ಹಾಲಿರುವುದನ್ನು ಒಪ್ಪಿಕೊಳ್ಳೋಣ. ಆದರೆ, ನಮ್ಮ ಮಕ್ಕಳಿಗೆ ಪುಷ್ಟಿಗಾಗಿ ಹಾಲು ಕೊಡುವಾಗ ಚಿಕ್ಕ ಒಳಲೆಯಲ್ಲಿ ಕೊಟ್ಟರೆ ಸಾಕು. ಅದಕ್ಕೆ ಬದಲಾಗಿ ಚಿನ್ನದ ಕಡಾಯಿ ಬಹಳ ಬೆಲೆಯುಳ್ಳದ್ದು ಎಂದು ಮಕ್ಕಳು ಅದರಲ್ಲಿ ಹಾಲು ಕುಡಿಯಲೆಂದು ಬಿಟ್ಟರೆ ಆ ಕಡಾಯಿ ಯನ್ನು ಎತ್ತುವಾಗ ಹಾಲನ್ನು ಚೆಲ್ಲಿಕೊಂಡು, ಆ ಭಾರವಾದ ಕಡಾಯಿಯನ್ನು ಮೈಮೇಲೆ ಹಾಕಿಕೊಂಡು ಮಕ್ಕಳು ಅಪಘಾತಕ್ಕೆ ಒಳಗಾಗುತ್ತಾರೆ. ಒಂದು ವೇಳೆ ಎತ್ತಲು ಸಮರ್ಥರಾದ ಮಕ್ಕಳೂ ಅದನ್ನು ಚೆಲ್ಲಿಕೊಂಡು ಬಾಯಿಗೆ ಸುರಿದುಕೊಂಡರೂ ಹಾಲು ಹೊಟ್ಟೆಗೆ ಹೋಗದಿರಬಹುದು. ಚಿನ್ನದ ಕಡಾಯಿ ಎಷ್ಟೇ ಬೆಲೆ ಬಾಳುವುದಾದರೂ ಅದರ ಭಾರ ನಮಗೆ ಬೇಡ.

ಪಠ್ಯಪುಸ್ತಕಗಳನ್ನು ಸಿದ್ಧಮಾಡುವಾಗ ಮನಶ್ಶಾಸ್ತ್ರದ ದೃಷ್ಟಿಯಿಂದ, ಅದರಲ್ಲೂ ಮಕ್ಕಳ ಮನಸ್ಸಿನ ಪರಿಜ್ಞಾನದಿಂದ ಬೇರೆ ಬೇರೆ ಭಾಷೆಯವರು ಏನು ಮಾಡಿದ್ದಾರೆ, ಏನು ಹೇಳುತ್ತಾರೆ —ಎಂಬುದನ್ನು ಮನ್ನಿಸಬೇಕು. ಈಗ ರಷ್ಯದಲ್ಲಿ ನೂರಾರು ಭಾಷೆಗಳಿವೆ. ಉಜ್‌ಬೆಕ್ ಸಂಸ್ಥಾನದಲ್ಲಿ ಆಡುವ ಭಾಷೆ ಹೊರತು ಲಿಪಿ ಕೂಡ ಇರಲಿಲ್ಲ. ಅಂತಹ ಕಾಡು ಜನರಿದ್ದ ದೇಶವದು. ಈಗ ಅದರ ಭಾಷೆ ಬೆಳೆದು ಒಂದು ವಿಶ್ವವಿದ್ಯಾನಿಲಯವು ನಿರ್ಮಿತವಾಗಿ ಲಕ್ಷಾಂತರ ಗ್ರಂಥಗಳು ಸೃಷ್ಟಿಯಾಗಿ ಸಂಶೋಧನೆಯ ಕಾರ್ಯವೂ ನಡೆಯುತ್ತಿದೆ. ಇದನ್ನು ನೋಡಿದಾಗ ಆಶ್ಚರ್ಯವೂ ಆನಂದವೂ ಆಗುತ್ತದೆ. ಎಲ್ಲೋ ಒಂದು ಮೂಲೆಯ ದೇಶ ಇಂತಹ ಅದ್ಭುತ ರೀತಿಯಲ್ಲಿ ಮುಂದುವರಿದಿರುವಾಗ, ಆ ದೇಶ ವೈಜ್ಞಾನಿಕ ಜ್ಞಾನವನ್ನು ಹೇಗೆ ಪಡೆಯುತ್ತಿದೆ, ಇಂಗ್ಲಿಷನ್ನು ಎಷ್ಟರಮಟ್ಟಿಗೆ ಬಳಸುತ್ತಿದೆ—ಎಂಬುದನ್ನು ತಿಳಿಯಬೇಕು. ನಾವು ರಾಗ ರಸರಂಜಿತರಾಗುವುದು ಬೇಡ. ವೈಜ್ಞಾನಿಕವಾಗಿ ವಿವೇಚನೆಯಿಂದ ವಿಚಾರ ಮಾಡೋಣ. ಚೀಣಾ ಮೊದಲಾದ ದೇಶಗಳಲ್ಲಿ ಇಂಗ್ಲಿಷಿನ ಸ್ಥಾನಮಾನವೇನೆಂಬುದನ್ನು ಅರಿತುಕೊಳ್ಳೋಣ. ಈ ವಿಶಾಲವಾದ ದೃಷ್ಟಿಯಿಂದಲೂ ವಿಚಾರದಿಂದಲೂ ವಿವೇಕಿಗಳಾಗಿ ಇನ್ನುಮುಂದೆ ನಮ್ಮ ಮಕ್ಕಳ ತಲೆಯ ಮೇಲೆ ಇಂಗ್ಲಿಷ್ ಚಪ್ಪಡಿಯ ಭಾರವನ್ನು ಹೊರಿಸಿ, ಅವರನ್ನು ಕುಂಠಿತರನ್ನಾಗಿ ಮಾಡುವ ಅನುಚಿತ ಕಾರ್ಯವನ್ನು ನಿಲ್ಲಿಸಬೇಕು. ಈ ವಿಚಾರವಾಗಿ ಎಲ್ಲರೂ ಚೆನ್ನಾಗಿ ಆಲೋಚಿಸಿ, ರಾಷ್ಟ್ರದ ಅಭ್ಯುದಯಕ್ಕೆ ಸಾಧಕವಾದುದನ್ನು ಕಾರ್ಯರೂಪಕ್ಕೆ ತರಲು ಯತ್ನಿಸಬೇಕು. ಇಂಗ್ಲಿಷಿನಲ್ಲಿ ಸಾಧಿಸಿರುವಷ್ಟನ್ನು ನಾವು ಸಾಧಿಸಿಲ್ಲವೆಂದು ದುಃಖಿಸಬೇಕಾಗಿಲ್ಲ. ವೈಜ್ಞಾನಿಕ ಕ್ಷೇತ್ರವನ್ನು ಬಿಟ್ಟರೆ, ಸಾಹಿತ್ಯ ಅಲಂಕಾರ

ಇತ್ಯಾದಿ ಪ್ರಕಾರಗಳಲ್ಲಿ ನಾವು ನಾಚಿಕೊಳ್ಳಬೇಕಾಗಿಲ್ಲ. ಗ್ರೀಕ್, ಫ್ರೆಂಚ್, ಜರ್ಮನ್, ಲ್ಯಾಟಿನ್—ಈ ಯಾವ ಭಾಷೆಗಳೂ ಮಾಡದ ಅದ್ಭುತ ಪ್ರಗತಿಯನ್ನು ಭಾರತೀಯ ಕಾವ್ಯಮೀಮಾಂಸೆ ಸಾಧಿಸಿದೆ. ಐ. ಎ. ರಿಚರ್ಡ್ಸ್ ಮೊದಲಾದವರು ಈ ದೃಷ್ಟಿಯಲ್ಲಿ ಸ್ವಲ್ಪಮಟ್ಟಿಗೆ ವಿಚಾರ ಮಾಡಿದ್ದಾರೆ, ಇತ್ತೀಚಿಗಷ್ಟೆ.

ಪಠ್ಯ ವಿಷಯಗಳನ್ನು ಪ್ರಾದೇಶಿಕ ಭಾಷೆಗಳಲ್ಲಿ ಬೋಧಿಸು ವುದರ ಪ್ರಯೋಜನವನ್ನು ಕುರಿತು ಎರಡು ಮಾತು. ಕಾಲೇಜಿಗೆ ಬರುವ ಮುನ್ನ ವಿದ್ಯಾರ್ಥಿ ಕ್ಯಾಟ್, ರ್‍ಯಾಟ್, ಮ್ಯಾಟ್—ಎಂಬ ಮಟ್ಟದಿಂದ ಬಹು ಮೇಲಕ್ಕೇನೂ ಹೋಗಿರುವುದಿಲ್ಲ. ಅವನು ಇಂಗ್ಲಿಷ್‌ನಲ್ಲಿರುವ ಪಾರಿಭಾಷಿಕ ಶಬ್ದಗಳನ್ನು ಉಚ್ಚರಿಸುವುದು ಕೂಡ ಕಷ್ಟ. ಲಾಜಿಕ್ ಬಹಳ ಕಷ್ಟವಾದ ಪಾಠವೆಂದು ವಿದ್ಯಾರ್ಥಿ ಗಳು ತಿಳಿದಿದ್ದರು. ಈಗ ಆ ಪಾಠವನ್ನು ಕನ್ನಡದಲ್ಲಿ ಬೇಗನೆ ಗ್ರಹಿಸುವಂತಾಗಿದೆ. ಇಂಗ್ಲಿಷಿನಲ್ಲಿ ಲಾಜಿಕ್ಕನ್ನು ಓದುವುದಕ್ಕಿಂತಲೂ ಕನ್ನಡದಲ್ಲಿ ತರ್ಕಶಾಸ್ತ್ರ ಸಂಗ್ರಹವನ್ನು ಓದುವುದು ಅವನಿಗೆ ಹೆಚ್ಚು ಸುಲಭ. ಓದುವ ವಿಷಯ ತನಗೆ ಅರ್ಥವಾಗುವುದೆಂಬ ಆತ್ಮವಿಶ್ವಾಸ ವಿದ್ಯಾರ್ಥಿಗೆ ಮೂಡುತ್ತದೆ. ಭೌತಶಾಸ್ತ್ರ ಮೊದಲಾದುವೂ ಕನ್ನಡದ ಮೂಲಕ ಸುಲಭವಾಗಿ ವಿದ್ಯಾರ್ಥಿ ಗಳಿಗೆ ತಿಳಿಯುತ್ತದೆ. ಇನ್ನೂ ಕನ್ನಡದಲ್ಲಿ ಹೆಚ್ಚಾಗಿ ಗಹನವಾದ ಶಾಸ್ತ್ರ ಗ್ರಂಥಗಳು ಸಿದ್ಧವಾಗಿ ವಿದ್ಯಾರ್ಥಿಗಳು ಸುಲಭವಾಗಿ ಗ್ರಹಿಸುವಂತಾಗುತ್ತದೆ. ಈ ದೃಷ್ಟಿಯಲ್ಲಿ ಮುಂದುವರಿದರೆ ತಂದೆ-ತಾಯಿಗಳಿಗೆ ಆಗುತ್ತಿರುವ ಕಷ್ಟವೂ, ಉಪಾಧ್ಯಾಯರ ವ್ಯರ್ಥ ಶ್ರಮವೂ ವಿದ್ಯಾರ್ಥಿಗಳ ನಿರಾಶೆ ಹತಾಶೆಗಳೂ ಪರಿಹಾರವಾಗಿ ರಾಷ್ಟ್ರದ ಸರ್ವೋದಯಕ್ಕೆ ಹೊಸ ಚೈತನ್ಯ ಮೂಡಿದಂತಾಗುತ್ತದೆ. ಈ ನಿಟ್ಟಿನಲ್ಲಿ ನಾವು ಮಾತ್ರವೇ ಅಲ್ಲ; ಇತರ ಅನೇಕ ವಿಶ್ವವಿದ್ಯಾ

ನಿಲಯಂಗಳು ಪ್ರಯೋಗಗಳನ್ನು ನಡೆಸುತ್ತಾ ಇವೆ. ಅವುಗಳ ಫಲಿತಾಂಶವನ್ನು ಕಾದು ನೋಡೋಣ.

ದೇಶಭಾಷಾಮಾಧ್ಯಮ ಕಲಾವಿಭಾಗಕ್ಕೆ ಅಷ್ಟೇನು ಅಹಿತವಾಗಿರದಿದ್ದರೂ ವಿಜ್ಞಾನ ಬೋಧನೆಗೆ ಮಾತ್ರ ಬಹು ನಷ್ಟಕಾರಿಯೆಂಬ ಭಾವನೆ ಕೆಲವರ ತಲೆಯಲ್ಲಿ ತುಂಬಿದೆ. ಆದರಿಂದ ದೇಶದ ಪ್ರಗತಿಗೆ ಕೊಡಲಿಯಿಂಟ್ಟುಂತಾಗುವುದೆಂದು ಅವರ ಎಣಿಕೆ. ವೈದ್ಯ ಅಥವಾ ಎಂಜನಿಯರಿಂಗ್ ವೃತ್ತಿ ಶಿಕ್ಷಣದಲ್ಲಿ ಬರುವ ಪಾರಿಭಾಷಿಕ ಪದಗಳನ್ನು ಭಾಷಾಂತರ ಮಾಡಲು ಸಾಧ್ಯವೆ—ಎಬಂದು ಅವರ ಶಂಕೆ. ಇದಕ್ಕೆ ಉತ್ತರವಿಷ್ಟೆ. ಪಾರಿಭಾಷಿಕ ಶಬ್ದಗಳನ್ನು ಭಾಷಾಂತರ ಮಾಡುವ ಅವಿವೇಕಕ್ಕೆ ನಾವು ಹೋಗಬೇಕಾದುದಿಲ್ಲ. ಕಾರು ನಡೆಸುವ ಡ್ರೈವರ್ ಅಥವಾ ಕಂಡಕ್ಟರು ಇಂಗ್ಲಿಷಿನಲ್ಲಿ ಪ್ರಾವೀಣ್ಯ ಪಡೆದವರಲ್ಲವಾದರೂ ಅವರು ಕಾರಿನ ನೂರಾರು ಭಾಗಗಳ ಹೆಸರುಗಳನ್ನು ಹಾಗೆಯೇ ಬಳಸುತ್ತಾರೆ. ಕನ್ನಡದಲ್ಲಿಯೇ ಮಾತನಾಡುತ್ತಾರೆ. ಸೊಗಸಾಗಿ ಕಾರನ್ನು ನಡೆಸುತ್ತಾರೆ. ಸಸ್ಯಶಾಸ್ತ್ರ, ಪ್ರಾಣಿಶಾಸ್ತ್ರ ಮೊದಲಾದ ವಿಜ್ಞಾನ ವಿಭಾಗಗಳಲ್ಲಿ ಸಹಸ್ರಾರು ಪಾರಿಭಾಷಿಕ ಪದಗಳಿವೆ. ಅವೆಲ್ಲಾ ಗ್ರೀಕ್ ಅಥವಾ ಲ್ಯಾಟಿನ್ ಮೂಲದಿಂದ ಬಂದುವು. ಅವನ್ನು ಮೂಲದಲ್ಲಿರುವಂತೆಯೇ ಕನ್ನಡದಲ್ಲಿ ಬಳಸಿಕೊಳ್ಳುತ್ತೇವೆ. ಮ್ಯಾಗ್ನೋಲಿಯಾ ಗ್ರಾಂಡಿಫ್ಲೋರಾ ಎಂಬುದು ಒಂದು ಹೂವಿನ ಹೆಸರು. ಕನ್ನಡದಲ್ಲಿಯೂ ಅದಕ್ಕೆ ಅದೇ ಹೆಸರು. ಅಂತರರಾಷ್ಟ್ರೀಯವಾದ ಪಾರಿಭಾಷಿಕ ಶಬ್ದಗಳನ್ನು ಹೀಗೆ ಬಳಸಿಕೊಳ್ಳುವುದರಿಂದ ಶಿಕ್ಷಣ ಮಾಧ್ಯಮವನ್ನು ಇಂಗ್ಲಿಷಿನಿಂದ ದೇಶಭಾಷೆಗೆ ಬಳಸಿಕೊಳ್ಳುವುದು ಸುಲಭವಾಗುತ್ತದೆ. ಹೀಗೆ ಹೇಳುವಾಗ ನಾವು ಇಂಗ್ಲಿಷನ್ನು ಸಂಪೂರ್ಣವಾಗಿ ಕೈಬಿಡುತ್ತೇವೆಂದು ಅರ್ಥವಲ್ಲ. ಕಾಲೇಜಿನಲ್ಲಿ

ಇಂಗ್ಲಿಷ್ ಭಾಷಾಶಿಕ್ಷಣ ಕಡ್ಡಾಯವಾಗಿ ಇದ್ದೇ ಇರುತ್ತದೆ. ಇದರಿಂದ ನಾವು ಯಾವ ದೇಶಕ್ಕೇ ಹೋದರೂ ಯಾವ ಭಾಷೆ ಯನ್ನೇ ಆಡಿದರೂ ಟೆಕ್ನಿಕಲ್‌ಟರ್ಮ್ಸ್ ಒಂದೇ ಆಗಿರುವುದರಿಂದ ಸುಲಭವಾಗಿ ಪಾಠ ಹೇಳಬಹುದು, ಪಾಠ ಕೇಳಬಹುದು.

ಸುಮಾರು ಎರಡು ಶತಮಾನಗಳಿಂದಲೂ ಆಳುವವರ ಭಾಷೆ ಯಾಗಿದ್ದು ಆಳುವ ಭಾಷೆಯೂ ಆಗಿದ್ದ ಇಂಗ್ಲಿಷ್ ಒಂದು ರೀತಿಯ ದಂಡ ವಿಧಾನದಿಂದಲೇ ನಮ್ಮನ್ನು ಆಕರ್ಷಿಸುತ್ತಿದ್ದಿತು; ಅದರ ಆರ್ಥಿಕಪ್ರಯೋಜನವೂ ಅದರ ಅಭ್ಯಾಸಕ್ಕೆ ಒಂದು ಮಹತ್ ಪ್ರೇರಣೆಯಾಗಿದ್ದಿತು. ಅಲ್ಲದೆ ಭರತಖಂಡದ ಸ್ವಂತ ಆಸ್ತಿಯಾದ ವೇದ, ಉಪನಿಷತ್ತು, ದರ್ಶನಗಳನ್ನು ಇಂಗ್ಲಿಷ್ ಮುಖಾಂತರ ವಾಗಿಯೇ ಅಧ್ಯಯನ ಮಾಡುವ ಪರಿಪಾಟಿಯಿತ್ತು. ದೇವ ಭಾಷೆಯಲ್ಲಿಯ ಪವಿತ್ರ ವಿಷಯಗಳನ್ನು ಓದಬಾರದು, ಕೇಳ ಬಾರದು ಎಂಬ ಭಯಭೀತಿಗಳಿದ್ದ ಕಾಲದಲ್ಲಿ ಇಂಗ್ಲಿಷ್ ತನ್ನ ಭಾಷಾಂತರಗಳ ಮೂಲಕ ಇವುಗಳಿಗೆಲ್ಲಾ ಪ್ರವೇಶವನ್ನು ನೀಡಿದು ದರಿಂದ ಅದಕ್ಕೆ ಸಂಸ್ಕೃತಕ್ಕಿಂತಲೂ ಹೆಚ್ಚು ಗೌರವ ಸಲ್ಲುವುದು. ಸ್ವಾಭಾವಿಕವಾಗಿತ್ತು. ಆದರೆ, ನಮ್ಮ ಸಾಹಿತ್ಯ ದರ್ಶನಗಳ ಪರಿಚಯವಾದ ಮೇಲೆ ಈ ದೃಷ್ಟಿ ಬದಲಾಯಿಸುವುದು ಸ್ವಾಭಾವಿಕ. ನಾವು ಎಷ್ಟಾದರೂ ಹಿಮಾಲಯದ ಮಕ್ಕಳು; ಪಾಶ್ಚಾತ್ಯರು ಆಲ್ಪ್ಸ್‌ಪರ್ವತದ ಮಕ್ಕಳು. ಅವರು ವಿಜ್ಞಾನ ದಲ್ಲಿ ಬಹು ಮುಂದುವರಿದಿದ್ದಾರೆ. ಆದರೆ ದರ್ಶನದಲ್ಲಿ ಅವರನ್ನು ನಮ್ಮವರೊಡನೆ ಹೋಲಿಸಿದಾಗ ಅವರನ್ನು ಕುಬ್ಜರೆಂದು ಕರೆಯ ಬೇಕಾಗುತ್ತದೆ. ಇನ್ನು ಮುಂದೆ ನಾವು ಏರಲಿರುವ ಎತ್ತರ ಭಗವತಿ ವಾಗ್ದೇವಿ ನಮ್ಮಲ್ಲಿ ಸೃಷ್ಟಿಸುವ ಮಹಾಕವಿಗಳನ್ನೂ ಮಹಾ ದಾರ್ಶನಿಕರನ್ನೂ ಅವಲಂಬಿಸುತ್ತದೆ. ನಮ್ಮ ಭಾಷೆಗೆ

ಜಗತ್ತಿನ ಯಾವ ಭಾಷೆಯ ಶ್ರೀಮಂತತೆಗಾದರೂ ಹೆಗಲೆಣೆಯಾಗಿ ನಿಲ್ಲುವ ಶಕ್ತಿಯಿಂದೆ.

ಈ ತತ್ವವನ್ನು ಗ್ರಹಿಸಿದ ಮೈಸೂರು ವಿಶ್ವವಿದ್ಯಾನಿಲಯ ಪ್ರೀ-ಯೂನಿವರ್ಸಿಟಿ ತರಗತಿಯಲ್ಲಿ ಈ ವರ್ಷ ಕನ್ನಡ ಮಾಧ್ಯಮವನ್ನು ಬಳಕೆಗೆ ತಂದಿದೆ. ಇಂಗ್ಲಿಷಿನಲ್ಲಿ ಪ್ರಭುತ್ವವನ್ನು ಸಂಪಾದಿಸಿ ಅಖಿಲ ಭಾರತರಂಗದಲ್ಲಿ ಅಥವಾ ಅಂತರರಾಷ್ಟ್ರದಲ್ಲಿ ಕೆಲಸ ಮಾಡಬೇಕೆನ್ನುವವರು ಇಂಗ್ಲಿಷ್ ಮಾಧ್ಯಮವನ್ನು ತೆಗೆದುಕೊಳ್ಳುವುದಕ್ಕೂ ಅವಕಾಶವಿದೆ. ಒಂದಕ್ಕಿಂತ ಹೆಚ್ಚು ಸೆಕ್ಷನ್ನುಗಳಿರುವ ಪ್ರತಿಯೊಂದು ಕಾಲೇಜಿನಲ್ಲಿಯೂ ಒಂದು ಸೆಕ್ಷನ್ನನ್ನು ಮಾತ್ರ ಕನ್ನಡ ಮಾಧ್ಯಮಕ್ಕೆಂದು ಮೀಸಲಾಗಿರಿಸಿದೆ. ಹತ್ತು ಇಪ್ಪತ್ತು ವರ್ಷಗಳಿಂದ ಪಾಠ ಹೇಳುತ್ತಿರುವ ಪ್ರಾಧ್ಯಾಪಕರು ಇದಕ್ಕಾಗಿ ಕನ್ನಡದಲ್ಲಿ ಪಠ್ಯಪುಸ್ತಕಗಳನ್ನು ಬರೆದಿದ್ದಾರೆ. ಈ ಕನ್ನಡ ಮಾಧ್ಯಮದ ಫಲಿತಾಂಶವನ್ನು ಅಂಕಿ-ಅಂಶಗಳೊಡನೆ ಸಂಗ್ರಹಿಸಲು ಏರ್ಪಾಟು ಮಾಡಲಾಗಿದೆ. ಆ ಫಲಿತಾಂಶಗಳನ್ನು ಸಾರ್ವಜನಿಕರ ಪರಿಶೀಲನೆಗಾಗಿ ಪತ್ರಿಕೆಗಳಲ್ಲಿ ಪ್ರಕಟಿಸಬೇಕೆಂದು ನಿಶ್ಚಯಿಸಲಾಗಿದೆ.

## ೪. ಪ್ರಕಟಣೆಗಳು

ವಿಶ್ವವಿದ್ಯಾನಿಲಯದ ಪ್ರಸಾರಾಂಗವು 'ಪ್ರಚಾರ ಪುಸ್ತಕ ಮಾಲೆ'ಯ ಹೊತ್ತಿಗೆಗಳನ್ನು ಪ್ರಕಟಿಸುವುದಲ್ಲದೆ 'ಕನ್ನಡ ಗ್ರಂಥ ಮಾಲೆ', 'ಪಠ್ಯ ಪುಸ್ತಕಮಾಲೆ', 'ಸರ್ ಕೆ. ಪಿ. ಪುಟ್ಟಣ್ಣ ಚೆಟ್ಟರ ಪುದುವಟ್ಟಿನ ಪ್ರಕಟಣ ಮಾಲೆ', 'ವಿಶೇಷೋಪನ್ಯಾಸ ಪುಸ್ತಕ ಮಾಲೆ' ಎಂಬ ಬೇರೆ ಬೇರೆ ಮಾಲೆಗಳಲ್ಲಿಯೂ, 'ಇತರ ಪ್ರಕಟಣೆ' ಎಂಬ ಶಿರೋನಾಮೆಯಲ್ಲಿಯೂ ಗ್ರಂಥ ಪ್ರಕಟಣೆಯ ಕಾರ್ಯವನ್ನು

ಕೈಗೊಂಡಿದೆ. ಇದರ ಜೊತೆಗೆ 'ಪ್ರಬುದ್ಧ ಕರ್ಣಾಟಕ' ವೆಂಬ ತ್ರೈಮಾಸಿಕ ಪತ್ರಿಕೆಯನ್ನೂ ಪ್ರಕಟಿಸುತ್ತಿದೆ.

**ಕನ್ನಡ ಗ್ರಂಥಮಾಲೆ**—ಹಿಂದೆ ಕನ್ನಡ ಸಾಹಿತ್ಯವನ್ನು ಅಭಿವೃದ್ಧಿಪಡಿಸುವ ಉದ್ದೇಶದಿಂದ "ಕನ್ನಡ ಪ್ರಕಟಣ ಸಮಿತಿ" ಉದಯವಾಯಿತು. ನವೀನ ಕಾಲಕ್ಕೆ ಬೇಕಾದ ಸಾಹಿತ್ಯ, ಕಲೆ, ವಿಜ್ಞಾನ, ತತ್ವ, ಚರಿತ್ರೆ, ಧರ್ಮ, ಸಂಸ್ಕೃತಿ ಮೊದಲಾದ ವಿಷಯಗಳನ್ನು ಸುಲಭವಾದ ಶೈಲಿಯಲ್ಲಿ ಆಯಾ ವಿಚಾರಗಳಲ್ಲಿ ತಜ್ಞರಾದವರು ಬರೆಯಬೇಕೆಂದು ನಿಷ್ಕರ್ಷೆಯಾಯಿತು. ಈ ವಿಚಾರಗಳಲ್ಲದೆ ಕನ್ನಡದ ಪೂರ್ವ ಸಾಹಿತ್ಯವನ್ನು ಜನರಲ್ಲಿಯೂ ವಿದ್ಯಾರ್ಥಿವರ್ಗದಲ್ಲಿಯೂ ಪ್ರಚಾರಕ್ಕೆ ತರಲು ಉತ್ತಮ ಕಾವ್ಯ ಸಂಗ್ರಹಗಳನ್ನು ತರಬೇಕೆಂದು ಆಶಿಸಿದರು. ಅದರಂತೆಯೇ ಮೂಲಪ್ರತಿಗಳನ್ನು ಪರಿಶೋಧಿಸಿದ ಶುದ್ಧ ಪಾಠಗಳನ್ನೊಳಗೊಂಡು ಪೀಠಿಕೆ, ಶಬ್ದಕೋಶ, ಟಿಪ್ಪಣಿಗಳೊಡನೆ ಕೂಡಿದ ಕಾವ್ಯ ಸಂಗ್ರಹಗಳು ಪ್ರಕಟವಾಗಿವೆ. ಹರಿಶ್ಚಂದ್ರ ಕಾವ್ಯ ಸಂಗ್ರಹ, ಪ್ರಭುಲಿಂಗಲೀಲೆಯ ಸಂಗ್ರಹ, ಪಂಪರಾಮಾಯಣ ಸಂಗ್ರಹ, ಆದಿಪುರಾಣ ಸಂಗ್ರಹ, ಭರತೇಶ ವೈಭವ ಸಂಗ್ರಹ—ಈ ಸಾಹಿತ್ಯ ಸಂಗ್ರಹಗಳು ಈವರೆಗೆ ಅಚ್ಚಾಗಿವೆ. ಕನ್ನಡ ಕಾವ್ಯಮಾಲೆಯಲ್ಲಿ ರಾಜ್ಯಶಾಸ್ತ್ರ, ತತ್ವಶಾಸ್ತ್ರ, ಅರ್ಥಶಾಸ್ತ್ರ, ಕಾವ್ಯಮೀಮಾಂಸೆ ಇತ್ಯಾದಿ ಹಲವಾರು ವಿಷಯಗಳನ್ನೊಳಗೊಂಡ ಪುಸ್ತಕಗಳೂ ಪ್ರಕಟವಾಗಿವೆ.

ಜ್ಞಾನದ ಬೇರೆ ಬೇರೆ ಶಾಖೆಗಳಲ್ಲಿ ತಜ್ಞರಾದವರು ಈ ಪುಸ್ತಕಗಳನ್ನು ಸುಲಭಶೈಲಿಯಲ್ಲಿ ಬರೆದಿದ್ದರೂ ಪ್ರೌಢವಾದ ವಿಚಾರಗಳನ್ನೊಳಗೊಂಡಿರುವುದರಿಂದ ಇವು ಜನಸಾಮಾನ್ಯರಿಗೆ ಮಾತ್ರವೇ ಅಲ್ಲದೆ ವಿದ್ಯಾವಂತರಿಗೂ ಸಾಕಷ್ಟು ಉಪಯುಕ್ತವಾಗಿವೆ.

**ಪಠ್ಯಪುಸ್ತಕಮಾಲೆ**—ಕನ್ನಡ ಮಾಧ್ಯಮದ ಸೌಲಭ್ಯವನ್ನು ಸದುಪಯೋಗಪಡಿಸಿಕೊಂಡು ವಿಶ್ವವಿದ್ಯಾನಿಲಯದ ಅಭ್ಯಾಸವನ್ನು ಕೈಕೊಳ್ಳುವ ವಿದ್ಯಾರ್ಥಿಗಳ ಸೌಕರ್ಯಕ್ಕಾಗಿ ಈ ಮಾಲೆಯ ಪುಸ್ತಕಗಳು ಪ್ರಕಟಗೊಂಡಿವೆ. ಇದುವರೆಗೆ, ಸುಮಾರು ಇಪ್ಪತ್ತುನಾಲ್ಕು ಪುಸ್ತಕಗಳು ಈ ಮಾಲೆಯಲ್ಲಿ ಪ್ರಕಟವಾಗಿವೆ. ವಿಶ್ವವಿದ್ಯಾನಿಲಯದಲ್ಲಿ ಬಹುಕಾಲದಿಂದಲೂ ಪಾಠ ಹೇಳಿ ನುರಿತ ಅರಿತ ಅಧ್ಯಾಪಕರು ಈ ಗ್ರಂಥಗಳನ್ನು ಬರೆದಿರುವುದರಿಂದ ಇವು ಬಹುಮಟ್ಟಿಗೆ ನಿರ್ದುಷ್ಟವಾಗಿವೆ. ಕನ್ನಡದಲ್ಲಿ ಪಠ್ಯಪುಸ್ತಕಗಳಿಲ್ಲವೆಂಬ ಗೋಣಗಾಟ ಇವುಗಳ ಪ್ರಕಟಣೆಯಿಂದ ನಿಲ್ಲುವಂತಾಗಿದೆ. ಕನ್ನಡ ಮಾಧ್ಯಮದ ವಿದ್ಯಾರ್ಥಿಗಳು ಮಾತ್ರವೇ ಅಲ್ಲದೆ ಇಂಗ್ಲಿಷ್ ಮಾಧ್ಯಮದ ವಿದ್ಯಾರ್ಥಿಗಳಿಗೂ ಇವು ಉಪಯುಕ್ತವಾಗಿವೆಯೆಂದು ತಿಳಿದುಬರುತ್ತದೆ; ಅವರೂ ಇವುಗಳನ್ನು ಕೊಂಡು ಓದುವರೆಂದು ತಿಳಿದುಬಂದಿದೆ. ಈ ಪ್ರಕಟಣಾ ಕಾರ್ಯವನ್ನು ಮುಂದುವರಿಸಿ ಮೂರುವರ್ಷದ ಬಿ.ಎ., ಬಿ.ಎಸ್.ಸಿ., ಮೊದಲಾದ ಡಿಗ್ರಿ ತರಗತಿಯ ವಿವಿಧ ವಿಷಯಗಳ ಮೇಲೆ ಗ್ರಂಥಗಳನ್ನು ಬರೆಸುವ ಕಾರ್ಯವನ್ನು ಈಗಾಗಲೇ ಕೈಕೊಳ್ಳಲಾಗಿದೆ. ಒಂದೆರಡು ಗ್ರಂಥಗಳು ಈಗಾಗಲೆ ಹೊರಗೆ ಬಂದಿವೆ. ಇನ್ನೂ ಹತ್ತಾರು, ನೂರಾರು ಗ್ರಂಥಗಳು ಪ್ರಕಟಣೆಗೆ ಸಿದ್ಧವಾಗಿವೆ, ಸಿದ್ಧವಾಗುತ್ತಿವೆ. ಇನ್ನೊಂದು ವರ್ಷದೊಳಗಾಗಿ ಬಹುಶಃ ಅಗತ್ಯವಾದ ಎಲ್ಲ ಗ್ರಂಥಗಳೂ ವಿದ್ಯಾರ್ಥಿಗಳಿಗೆ ದೊರೆಯುವಂತಾಗುವುದೆಂದು ನನ್ನ ಭರವಸೆ.

**ಸರ್. ಕೆ. ಪಿ. ಪುಟ್ಟಣ್ಣಚೆಟ್ಟರ ಪುದುವಟ್ಟಿನ ಪ್ರಕಟನ ಮಾಲೆ**–ಪ್ರಚಾರ ಪುಸ್ತಕಮಾಲೆಯಂತೆಯೇ ಅತ್ಯಂತ ಜನಪ್ರಿಯವಾಗಿರುವ ಮತ್ತೊಂದು ಮಾಲೆ. ಈ ಮಾಲೆಯಲ್ಲಿ

ಈಗ ಸುಮಾರು ಇಪ್ಪತ್ತೊಂದು ಪುಸ್ತಕಗಳು ಪ್ರಕಟವಾಗಿವೆ. ವೈಜ್ಞಾನಿಕ ಮತ್ತು ವ್ಯಾವಹಾರಿಕ ವಿಷಯಗಳ ತಿಳಿವು ಸಾಮಾನ್ಯ ಜನರಲ್ಲಿ ಹರಡಲನುಕೂಲವಾಗುವಂತೆ ಸರಳವೂ ಸುಲಭ ಗ್ರಾಹ್ಯವೂ ಆದ ಭಾಷೆಯಲ್ಲಿ ಪುಸ್ತಿಕೆಗಳನ್ನು ಬರೆಯಿಸುವುದು ಈ ಮಾಲೆಯ ಉದ್ದೇಶ. ಈ ಮಾಲೆಯಲ್ಲಿ ಪ್ರಕಟವಾಗಿರುವ ಪುಸ್ತಿಕೆಗಳೆಲ್ಲ ಅಂಥವೇ. ಇಂತಹ ಪುಸ್ತಿಕೆಗಳ ಆವಶ್ಯಕತೆ ಹಿಂದೆ ಇದ್ದುದಕ್ಕಿಂತ ಇಂದು ಹೆಚ್ಚಾಗಿದೆ. ಪ್ರತಿಯೊಬ್ಬ ಸಾಮಾನ್ಯನೂ ವಿದ್ಯುಚ್ಛಕ್ತಿ, ವಿಮಾನ, ಬಾಂಬು, ರೇಡಿಯೋ ಮೊದಲಾದ ಶಕ್ತಿವಿಶೇಷಗಳನ್ನೂ ವಸ್ತುವಿಶೇಷಗಳನ್ನೂ ಪ್ರತಿನಿತ್ಯವೂ ನೋಡು ತ್ತಿರುತ್ತಾನೆ ; ಅವನ ಸುತ್ತಮುತ್ತ ಅನೇಕ ವಿಚಿತ್ರ ಪ್ರಾಕೃತಿಕ ಘಟನೆಗಳು ನಡೆಯುತ್ತಿರುತ್ತವೆ. ವೈಜ್ಞಾನಿಕ ಪ್ರಯೋಗ ಮತ್ತು ಸಂಶೋಧನೆಗಳ ಪರಿಣಾಮವಾಗಿ ಅವನ ಜೀವನ ದಿನೇ ದಿನೇ ಹೊಸತಾಗುತ್ತಿದೆ, 'ನಾಗರಿಕ'ವಾಗುತ್ತಿದೆ. ಈ ಶಕ್ತಿವಿಶೇಷ, ವಸ್ತು ವಿಶೇಷಗಳ, ವಿಚಿತ್ರ ಘಟನೆಗಳ, ವೈಜ್ಞಾನಿಕ ಪ್ರಯೋಗ ಗಳ, ನಾಗರಿಕ ಜೀವನದ ಕಡೆಗೆ ಅವನ ಕುತೂಹಲ ದೃಷ್ಟಿ ಸಹಜ ವಾಗಿ ಹರಡುತ್ತದೆ. ಅವು ಅವನಿಗೆ ಕೇವಲ ರಹಸ್ಯದ ಗಂಟಾ ಗುಳಿಯುದೆ ಅವನ ತಿಳಿವಿಗೆ ನಿಲುಕುವಂತೆ ಬೋಧಿಸುವುದು ತಿಳಿದವರ ಕರ್ತವ್ಯ.

ಇಂಥ ತಿಳಿವು ಹರಡಲನುಕೂಲವಾಗಲು ಶ್ರೀಮಂತರ ಧನ ಸಹಾಯವೂ ಒದಗಬೇಕಾಗುತ್ತದೆ. ಗ್ರಂಥಗಳನ್ನು ಬರೆಯಿಸಿ, ಪ್ರಕಟಿಸಿ ಅವುಗಳ ಪ್ರತಿಗಳನ್ನು ಜನರಲ್ಲಿ ಹಂಚುವುದು ಪುಣ್ಯ ಕಾರ್ಯವೆಂದು ಹಿಂದಿನವರು ಭಾವಿಸಿದ್ದರು. ಅಂತಹ ಭಾವನೆಗೆ ಅನುಗುಣವಾಗಿ ದಿವಂಗತ ಸರ್. ಕೆ. ಪಿ. ಪುಟ್ಟಣ್ಣಚೆಟ್ಟರು ವಿಶ್ವ ವಿದ್ಯಾನಿಲಯಕ್ಕೆ ಒಂದು ದತ್ತಿಯನ್ನು ಒದಗಿಸಿಕೊಟ್ಟು

ಈ ಮಾಲೆಯು ಬೆಳವಣಿಗೆಗೆ ಮಹದುಪಕಾರ ಮಾಡಿದ್ದಾರೆ. ಇವುಗಳ ಅಗ್ಗದ ಬೆಲೆ, ಅಗ್ಗಳವಾದ ವಿಷಯ—ಇವುಗಳಿಂದಾಗಿ ಈ ಪುಸ್ತಿಕೆಗಳು ಅತ್ಯಂತ ಜನಪ್ರಿಯವಾಗಿವೆ (ಪರಮಾಣು ಶಕ್ತಿ ಮುನ್ನುಡಿಯಿಂದ).

**ವಿಶೇಷೋಪನ್ಯಾಸ ಪುಸ್ತಕಮಾಲೆ**—ವಿಶ್ವವಿದ್ಯಾನಿಲಯದ ಸೋಪಾನವನ್ನು ಏರಲು ಅವಕಾಶವಿಲ್ಲದವರ ಮತ್ತು ಗ್ರಾಮಾಂತರದ ಸಾಮಾನ್ಯ ಜನರ ಅನುಕೂಲಕ್ಕಾಗಿ ಪ್ರಚಾರೋಪನ್ಯಾಸಗಳಿರುವಂತೆ ವಿಶ್ವವಿದ್ಯಾನಿಲಯದ ವಿವಿಧ ಕಾಲೇಜುಗಳಲ್ಲಿನ ವಿದ್ಯಾರ್ಥಿಗಳ ಮತ್ತು ಅಧ್ಯಾಪಕರ ಪ್ರಯೋಜನಕ್ಕಾಗಿ ವಿಶೇಷೋಪನ್ಯಾಸಗಳನ್ನು ಏರ್ಪಡಿಸಲಾಗುವುದು. ದೇಶವಿದೇಶಗಳ ತಜ್ಞರನ್ನು ಪ್ರಾಧ್ಯಾಪಕರನ್ನು ಆಗಾಗ್ಗೆ ಆಹ್ವಾನಿಸಿ, ಅವರ ಭಾಷಣಗಳನ್ನು ಏರ್ಪಡಿಸಿ, ಆ ಮೂಲಕ ಪರಸ್ಪರ ಸಂಪರ್ಕಕ್ಕೂ ವಿಚಾರ ವಿನಿಮಯಕ್ಕೂ ಅವಕಾಶ ಕಲ್ಪಿಸುವುದು ಈ ಉಪನ್ಯಾಸದ ಉದ್ದೇಶ. ಈ ವ್ಯವಸ್ಥೆಯಿಂದ ಬೇರೆ ಬೇರೆ ವಿಶ್ವವಿದ್ಯಾನಿಲಯಗಳು ಯಾವ ನಿಟ್ಟಿನಲ್ಲಿ ಕೆಲಸ ಮಾಡುತ್ತಿವೆ? ಮುಂದೆ ಆಗಬೇಕಾಗಿರುವ ಕೆಲಸವೇನು? ಅದನ್ನು ಹೇಗೆ ಕಾರ್ಯಗತ ಮಾಡಬಹುದು? ಇಂತೆಲ್ಲ ವಿಷಯಗಳ ತುಲನೆ ಮತ್ತು ಪರ್ಯಾಲೋಚನೆ ಸುಲಭ ಸಾಧ್ಯವಾಗುತ್ತದೆ. ಈ ಮಾಲೆಯ ಭಾಷಣಗಳು ಕನ್ನಡ ಮತ್ತು ಇಂಗ್ಲಿಷ್ ಎರಡು ಭಾಷೆಗಳಲ್ಲಿಯೂ ನಡೆಯುತ್ತವೆ. ಲಿಖಿತ ಭಾಷಣಗಳನ್ನು ಅಚ್ಚುಹಾಕಿಸಿ ಈ ಮಾಲೆಯಲ್ಲಿ ಪ್ರಕಟಿಸಲಾಗುತ್ತದೆ. ಇತ್ತೀಚೆಗೆ ಭರತಖಂಡದ ಪ್ರಮುಖ ಭಾಷಾ ಸಾಹಿತ್ಯಗಳ ವಿಸ್ತೃತ ಪರಿಚಯವನ್ನು ಉಪನ್ಯಾಸಗಳ ಮೂಲಕ ಏರ್ಪಡಿಸಿ ಅವುಗಳನ್ನು ಪ್ರಕಟಿಸುವ ಕಾರ್ಯವನ್ನೂ ಕೈಕೊಳ್ಳಲಾಗಿದೆ. ಭರತಖಂಡದ ರಾಷ್ಟ್ರಭಾಷೆಗಳೆಂದೂ ಗೌರವಕ್ಕೆ

ಪಾತ್ರವಾಗಿರುವ ಹದಿನಾಲ್ಕು ಮುಖ್ಯ ಭಾಷೆಗಳ ಮೇಲೂ ಉಪನ್ಯಾಸಮಾಲೆಗಳನ್ನು ಏರ್ಪಡಿಸುವ ಪ್ರಯತ್ನ ನಡೆದಿದೆ. ಈಗಾಗಲೇ ತೆಲುಗು, ಮರಾಠಿ, ಬಂಗಾಳಿ, ಉರ್ದು ಮತ್ತು ಪರ್ಷಿಯನ್ ಭಾಷೆಗಳ ಮೇಲೆ ಉಪನ್ಯಾಸಗಳನ್ನು ಏರ್ಪಡಿಸಿದು ದಾಗಿದೆ. ಆಯಾ ಭಾಷಾ ಸಾಹಿತ್ಯದ ಮೇಲಿನ ಗ್ರಂಥಗಳು ಅಚ್ಚಿನಲ್ಲಿವೆ.

ನಮ್ಮ ಸೋದರ ಭಾಷೆಗಳಲ್ಲಿ ಯಾವ ಯಾವ ಪ್ರಯೋಗ ಗಳು ನಡೆಯುತ್ತಿವೆ, ಹೇಗೆ ನಡೆಯುತ್ತಿವೆ ಎಂಬುದನ್ನು ಅರಿತು ಕೊಳ್ಳುವುದು ಕೇವಲ ಕುತೂಹಲ ಶಮನಕ್ಕೆ ಮಾತ್ರವೇ ಅಲ್ಲದೆ ನಮ್ಮ ಸಾಹಿತ್ಯದ ತುಷ್ಟಿ–ಪುಷ್ಟಿಗಳನ್ನು ಸಾಧಿಸಲು ಇವು ಸಹಾಯಕವಾಗಬಹುದು. ಈ ಮಾಲೆಯಲ್ಲಿ ಈಗಾಗಲೇ ಎಂಟು ಪುಸ್ತಕಗಳು ಹೊರಬಂದಿವೆ. ಇನ್ನೂ ಹಲವು ಬೇಗನೆ ಹೊರ ಬರುವ ನಿರೀಕ್ಷೆಯಿಂದೆ.

**ಇತರ ಪ್ರಕಟಣೆಗಳು**—ಮೇಲಿನ ಪ್ರಕಟಣೆಗಳಲ್ಲದೆ ಆಳವಾದ ಅಭ್ಯಾಸಕ್ಕೂ ಸಂಶೋಧನೆಗೂ ಅಗತ್ಯವಾದ ಪ್ರಬಂಧ ಗ್ರಂಥಗಳು ಹಲವು ಈ ಪ್ರಸಾರಾಂಗದಿಂದ ಪ್ರಕಟಗೊಂಡಿವೆ.

**ಪ್ರಬುದ್ಧ ಕರ್ಣಾಟಕ**—ನಮ್ಮ ವಿಶ್ವವಿದ್ಯಾನಿಲಯ ಪ್ರಚಾರೋಪನ್ಯಾಸ ಮಾಲೆಯನ್ನೂ ಇತರ ಗ್ರಂಥಮಾಲೆಗಳನ್ನೂ ಹೊರಡಿಸುತ್ತಿರುವಂತೆಯೇ ತ್ರೈಮಾಸಿಕ ಪತ್ರಿಕೆಯನ್ನೂ ಹೊರಡಿಸುತ್ತಿದೆ. ಅದು ಹಿಂದೆ ವಿಶ್ವವಿದ್ಯಾನಿಲಯದ ಪತ್ರಿಕೆ ಆಗುವುದಕ್ಕೆ ಮುನ್ನ ಜನತೆಯ ಮಾಸಪತ್ರಿಕೆಯೇ ಆಗಿತ್ತು. ಅದೇ ಪ್ರಬುದ್ಧ ಕರ್ಣಾಟಕ. ಅದು ಚೈತ್ರ, ಆಷಾಢ, ಆಶ್ವಯುಜ, ಪುಷ್ಯಮಾಸಗಳ ಪೂರ್ಣಿಮಾ ದಿನದಂದು ಹೊರಬೀಳುತ್ತದೆ. ಈ ನಾಲ್ಕು ಸಂಚಿಕೆಗಳಲ್ಲಿ ಒಂದೊಂದೂ ಇನ್ನೂರು ಅಥವಾ

ಇನ್ನೂರೈವತ್ತು ಪುಟಗಳನ್ನು ಒಳಗೊಂಡಿರುತ್ತದೆ. ಸಾಮಾಜಿಕ, ಪೌರಾಣಿಕ, ಐತಿಹಾಸಿಕ ನಾಟಕಗಳೂ, ಕಥೆ, ಕವನಗಳೂ, ಸಾಹಿತ್ಯ ಮತ್ತು ವಿಜ್ಞಾನಗಳನ್ನು ಕುರಿತ ಪ್ರತಿಭಾಪೂರ್ಣ ಲೇಖನಗಳೂ ಈ ತ್ರೈಮಾಸಿಕದಲ್ಲಿ ಪ್ರಕಟವಾಗುತ್ತವೆ. ಒಂದೊಂದು ಸಲವೂ ತ್ರಿವರ್ಣ ಚಿತ್ರಗಳು, ರೇಖಾಚಿತ್ರಗಳು, ಛಾಯಾಚಿತ್ರಗಳು ಇವುಗಳಲ್ಲಿ ಪ್ರಕಟವಾಗುತ್ತವೆ. ಇವುಗಳ ಜೊತೆಗೆ ಕಳೆದ ಎರಡು ವರ್ಷಗಳಿಂದ ಸಂಪುಟಕ್ಕೆ ಒಂದರಂತೆ ವಿಜ್ಞಾನ ವಿಶೇಷಾಂಕವನ್ನು ಒದಗಿಸುತ್ತಿದೆ. ಈ ವರ್ಷದಿಂದ ಇದರ ಸಂಖ್ಯೆ ಎರಡಾಗಿದೆ. ವಿಜ್ಞಾನವನ್ನು ಕುರಿತು ಸುಲಭವಾದ ಶೈಲಿಯಲ್ಲಿ ಅಮೋಘವಾದ ಲೇಖನಗಳನ್ನು ಬರೆಯುಲಾಗುತ್ತಿದೆ. ಒಂದೊಂದು ಲೇಖನವೂ ಅದಕ್ಕೆ ಅಗತ್ಯವಾದ ಲೇಖನ ವಿವರಣೆಯ ಚಿತ್ರಗಳನ್ನು ಒಳ ಗೊಂಡಿರುತ್ತದೆ. ಒಟ್ಟಿನಲ್ಲಿ ಸುಮಾರು ಸಾವಿರ ಪುಟಕ್ಕೂ ಮಿಕ್ಕ ಸಾಹಿತ್ಯ ಇದರಿಂದ ಒದಗಿದಂತಾಗುತ್ತದೆ. ಆಧುನಿಕ ಸಾಹಿತ್ಯ ವಿಜ್ಞಾನಗಳ ಜ್ಞಾನಭಂಡಾರವನ್ನು ತುಂಬಿಕೊಂಡಿರುವ ಅದರ ವಾರ್ಷಿಕ ಚಂದಾ ಕೇವಲ ಮೂರೂವರೆ ರೂಪಾಯಿ. ಇದು ಸ್ವಲ್ಪ ಹೆಚ್ಚು ಕಡಮೆ ಅದರ ಕಾಗದದ ಬೆಲೆಯಷ್ಟಾಯಿತು. ಒಮ್ಮೆ ಓದಿ ಬಿಸಾಡುವ ಇತರ ಪತ್ರಿಕೆಗಳಂತೆ ಅಲ್ಲ, ಅದು. ಶಾಶ್ವತವಾಗಿ ಗ್ರಂಥಭಂಡಾರದಲ್ಲಿ ಇಟ್ಟುಕೊಳ್ಳಬೇಕಾದ ಅಮೂಲ್ಯವಾದ ಪತ್ರಿಕೆ ಅದು.

## ೫. ಪ್ರಸಾರಾಂಗದ ಮುನ್ನಡೆ

ಜ್ಞಾನಸಾಧನೆ ಮತ್ತು ವೈಜ್ಞಾನಿಕ ಸೌಲಭ್ಯಗಳು ಪಟ್ಟಣ ಗಳಲ್ಲಿ ಕೇಂದ್ರೀಕೃತವಾಗಿರುವುದರಿಂದ ಹಳ್ಳಿಯ ಜನರಿಗೆ ಈ

ಅನುಕೂಲಗಳು ದೊರಕುವುದು ಇಂದಿನ ಪರಿಸ್ಥಿತಿಯಲ್ಲಿ ಕಷ್ಟ ವಾಗಿದೆ. ವಿದ್ಯಾವಂತರು ಹಳ್ಳಿಯಲ್ಲಿ ನೆಲಸುವುದು ಕಡಮೆ ಯಾದುದರಿಂದ ನಮ್ಮ ಹಳ್ಳಿಗಳು ಅಜ್ಞಾನದಲ್ಲಿಯೇ ಮುಳುಗಿ ಹೋಗುವಂತಾಗಿವೆ. ಲೌಕಿಕ ಹಾಗೂ ಧಾರ್ಮಿಕ ವಿಚಾರಗಳು ಹಳ್ಳಿಯಲ್ಲಿ ಪ್ರಚಾರವಾಗಬೇಕು. ಗೃಹನಿರ್ಮಾಣ, ಗೊಬ್ಬರ, ವ್ಯವಸಾಯ, ರೋಗನಿವಾರಣೆ, ಗೃಹಕೈಗಾರಿಕೆ, ವ್ಯಾಪಾರ, ಕೃಷಿ ಉತ್ಪನ್ನ—ಇತ್ಯಾದಿ ಜೀವನಕ್ಕೆ ಅತ್ಯಂತ ಉಪಯುಕ್ತವಾದ ವಿಚಾರಗಳಿಂದ ಹಿಡಿದು ಅಣುಬಾಂಬ್, ಸ್ಪೂಟ್ನಿಕ್ ಅಂತರ್ ಗ್ರಹಯಾನ—ಇಂತಹ ಅತ್ಯಂತ ಆಧುನಿಕವಾದ ವೈಜ್ಞಾನಿಕ ವಿಚಾರವನ್ನು ಹಳ್ಳಿಯವರಿಗೆ ಅರ್ಥವಾಗುವಂತೆ ತಿಳಿಸಬೇಕು. ಭಾರತದ ಧಾರ್ಮಿಕ ಹಾಗೂ ಸಾಂಸ್ಕೃತಿಕ ಸಾರವಾದ ವೇದ, ಉಪನಿಷತ್ತು ಗೀತೆಗಳ ವಿಚಾರವಾಗಿ ಪ್ರತಿಯೊಬ್ಬ ಭಾರತೀಯನೂ ಸ್ಪಷ್ಟವಾದ ತಿಳಿವಳಿಕೆಯನ್ನು ಪಡೆಯಬೇಕು. ವಿಶ್ವವಿದ್ಯಾನಿಲಯವನ್ನು ಪ್ರವೇಶಿಸದ ಕಾರಣವಾಗಿ ಜನತೆ ಜ್ಞಾನವನ್ನು ಪಡೆಯಲು ಅವಕಾಶವನ್ನು ಪಡೆಯಲಿಲ್ಲವೆಂಬ ಕೊರತೆ ಇರಬಾರದು. ಜ್ಞಾನದ ಬಹುಮುಖಗಳ ಪರಿಚಯ ಸರಳ ಶೈಲಿಯಲ್ಲಿ ಸಿದ್ಧವಾದ ಕನ್ನಡ ಪುಸ್ತಕಗಳ ಮೂಲಕ ಎಲ್ಲರಿಗೂ ದೊರಕಬೇಕು. ವಿಶ್ವವಿದ್ಯಾನಿಲಯದ ಪ್ರಯೋಜನ ವನ್ನು ನಾಡಿನ ಮೂಲೆ ಮೂಲೆಯಲ್ಲಿರುವ ಜನತೆಯೂ ಪಡೆದರೆ ಮಾತ್ರ ವಿಶ್ವವಿದ್ಯಾನಿಲಯದ ಉದ್ದೇಶ ಸಫಲವಾಗುತ್ತದೆ. ಇಲ್ಲದಿದ್ದರೆ ವಿದ್ಯಾವಂತರು ಅವಿದ್ಯಾವಂತರು ಎಂಬ ಎರಡು ವರ್ಗಗಳು ಶಾಶ್ವತವಾಗಿ ಉಳಿಯುವುದಕ್ಕೆ ಅವಕಾಶವಾಗುತ್ತದೆ. ಜ್ಞಾನಪ್ರಸಾರದ ಈ ಕಾರ್ಯ ಬೃಹತ್ ಪ್ರಮಾಣದಲ್ಲಿ ನಡೆಯಲು ಪ್ರಸಾರಾಂಗದ ಕಾರ್ಯಕ್ಷೇತ್ರ ವಿಸ್ತೃತವಾಗಬೇಕು.

ಆಧುನಿಕ ಶ್ರವಣಸಾಧನ ಮತ್ತು ಯಂತ್ರ ಸಾಮಗ್ರಿಗಳನ್ನೊಳಗೊಂಡು ಸಂಸಜ್ಜಿತವಾದ ವಾಹನವು ನಮ್ಮ ಪ್ರಸಾರಾಂಗದಿಂದ ಪ್ರಕಟವಾಗುವ ಪುಸ್ತಕಗಳನ್ನು ಹೊತ್ತು ಹಳ್ಳಿಯ ಮೂಲೆ ಮೂಲೆಯನ್ನೂ ಸೇರಬೇಕು. ಉಪನ್ಯಾಸಗಳೊಡನೆ ಬೋಧಪ್ರದವಾದ ವಿಷಯಗಳನ್ನು ತಿಳಿಸಲು ಚಲನಚಿತ್ರಗಳನ್ನೂ ಬಳಸಬಹುದು. ಈ ರೀತಿಯಾದ ಜ್ಞಾನಪ್ರಸಾರವು ಸಮರ್ಪಕವಾಗಿ, ಸಮರ್ಥವಾಗಿ ಸೇವಾಮನೋಭಾವದಿಂದ ನಡೆಯುವುದಾದರೆ ಸಾಮಾಜಿಕ ಮೌಢ್ಯತೆ, ಮತೀಯ ಮೌಢ್ಯತೆ, ದೇಶಕಾಲದ ಮೌಢ್ಯತೆ, ಅಜ್ಞಾನದಿಂದಾಗುವ ಶೋಷಣೆ ಇತ್ಯಾದಿ ಸಮಾಜದ ಬಹುಕಾಲದ ರೋಗರುಜಿನಗಳು ನಾಶವಾಗಿ ಮಹಾತ್ಮಾ ಗಾಂಧೀಜಿಯವರು ಕಂಡ ರಾಮರಾಜ್ಯದ ಕನಸು ನನಸಾಗುವುದು. ವಿಶ್ವವಿದ್ಯಾನಿಲಯದ ವಿಶೇಷ ಜ್ಞಾನದ ಸಾಧಾರಣೀಕರಣವಾಗುವುದು. ಆಗ ಈ ಸಾಧಾರಣೀಕರಣ ದೇಶಭಾಷೆಗಳ ಮೂಲಕವೇ ಸಾಧ್ಯ. ಇಂಗ್ಲಿಷಿನಿಂದಲೇ ನಮ್ಮ ಜನತೆ ಉದ್ಧಾರವಾಗುತ್ತಾರೆ ಎಂಬ ಮೌಢ್ಯತೆ ಈಗ ತೊಲಗಿಹೋಗಿದೆ. ನಮ್ಮ ಮುಂದಿನ ಪ್ರಗತಿ ದೇಶಭಾಷೆಗಳ ಮೂಲಕ ಎಂಬುದು ಈಗ ಖಚಿತವಾಗಿದೆ.

ನಮ್ಮ ನಾಡಿನ ಲಕ್ಷಾಂತರ ಮಕ್ಕಳ ಉದ್ಧಾರವಾಗಬೇಕಾದರೆ ವಿಶ್ವವಿದ್ಯಾನಿಲಯದಲ್ಲಿ ಎಲ್ಲ ತರಗತಿಗಳಲ್ಲಿಯೂ ಕನ್ನಡ ಮಾಧ್ಯಮವು ಆವಶ್ಯಕ. ಈಗಾಗಲೇ 'ಪ್ರೀ-ಯೂನಿವರ್ಸಿಟಿ' ತರಗತಿಯಲ್ಲಿ ಕನ್ನಡ ಮಾಧ್ಯಮವು ಪ್ರಾರಂಭವಾಗಿದೆ. ಈ ತರಗತಿಗೆ ಬೇಕಾಗುವ ಪಠ್ಯಪುಸ್ತಕಗಳು ಕನ್ನಡದಲ್ಲಿ ಸಿದ್ಧವಾಗಿವೆ. ಬೇರೆ ಬೇರೆ ತರಗತಿಗಳಿಗೆ ಬೇಕಾಗುವ ನೂರಾರು ಪುಸ್ತಕಗಳು ಸಿದ್ಧವಾಗುತ್ತಿವೆ. ಈ ಪುಸ್ತಕಗಳಲ್ಲದೆ ವಿಶ್ವವಿದ್ಯಾನಿಲಯದ

ಅಧ್ಯಾಪಕರಿಗೂ ವಿದ್ಯಾರ್ಥಿಗಳಿಗೂ ಅನಿವಾರ್ಯವಾಗಿ ಬೇಕಾಗುವ ಪ್ರೌಢಗ್ರಂಥಗಳು ಸಿದ್ಧವಾಗುವ ದಿನಗಳು ದೂರವಾಗಿಲ್ಲ. ಇನ್ನು ಹಲವು ವರ್ಷಗಳಲ್ಲಿ ಅತ್ಯಂತ ಗಹನವಾದ ವಿಚಾರಗಳನ್ನು ಬೋಧಿಸಲು ಬೇಕಾದ ಎಲ್ಲ ಪುಸ್ತಕಗಳು ಸಿದ್ಧವಾಗಿ ಸಂಶೋಧನೆ ನಡೆಸುವ ವಿದ್ಯಾರ್ಥಿಗಳಿಗೆ ಕೂಡ ಸಕಲ ಸೌಲಭ್ಯಗಳೂ ಕನ್ನಡ ಗ್ರಂಥಗಳಿಂದಲೇ ದೊರಕುತ್ತವೆ. ಈ ವಿಶೇಷ ಕಾರ್ಯವನ್ನು ಮೈಸೂರು ವಿಶ್ವವಿದ್ಯಾನಿಲಯದ ಪ್ರಸಾರಾಂಗವು ಕೈಗೊಂಡಿದೆ. ಮುಂದೆ ಪ್ರಾಧ್ಯಾಪಕರ, ಅಧ್ಯಾಪಕರ ಹಾಗೂ ವಿದ್ವಾಂಸರ ನೆರವಿನಿಂದ ಸಮರ್ಪಕವಾಗಿ ಸಾಧಿಸುವುದರಲ್ಲಿ ಸಂದೇಹವಿಲ್ಲ.

ಉತ್ತಮ ಪುಸ್ತಕಗಳ ಪ್ರಕಟಣೆ ಹಾಗೂ ಪ್ರಚಾರೋಪನ್ಯಾಸಗಳನ್ನು ಕೈಗೊಳ್ಳುವುದರೊಡನೆ ಪ್ರಸಾರಾಂಗವು ಪುಸ್ತಕಗಳ ಮಾರಾಟದ ವ್ಯವಸ್ಥೆಯನ್ನು ಮಾಡಬೇಕು. ಪ್ರಸಾರಾಂಗದ ಪುಸ್ತಕಗಳು ದೊರಕುವುದು ಕಷ್ಟವಾಗಬಾರದು. ಪುಸ್ತಕಗಳು ತಪ್ಪಿಲ್ಲದೆ ಸುಂದರವಾಗಿ ಪ್ರಕಟವಾಗಿ ಕಡಮೆ ಬೆಲೆಗೆ ದೊರಕುವಂತಾದರೆ ನಮ್ಮ ನಾಡಿನ ಜನರು ಅವುಗಳ ಪೂರ್ಣ ಪ್ರಯೋಜನ ಪಡೆಯುತ್ತಾರೆ. 'ವಯಸ್ಕರ ಶಿಕ್ಷಣ ಸಮಿತಿ' ಪ್ರಾರಂಭಿಸಿದ ಕಾರ್ಯವನ್ನು ವಿಶ್ವವಿದ್ಯಾನಿಲಯದ ಪ್ರಸಾರಾಂಗವು ಪೂರ್ಣಗೊಳಿಸಿದಾಗ ನಾಡಿನಲ್ಲಿ ಜ್ಞಾನಾರ್ಜನೆಯ ಪೂರ್ಣಾವಕಾಶವು ಎಲ್ಲರಿಗೂ ಲಭಿಸಿ ಜನತೆಯ ಆಶೋತ್ತರಗಳನ್ನು ಈಡೇರಿಸಿದಂತಾಗುತ್ತದೆ. ವಿಶ್ವವಿದ್ಯಾನಿಲಯದ ವಿಶೇಷ ಜ್ಞಾನದ ಸಾಧಾರಣೀಕರಣವಾಗಿ ಸರ್ವೋದಯದ ಕನಸು ನನಸಾಗುತ್ತದೆ. ನಾಡಿನ ಮೂಲೆ ಮೂಲೆಯಲ್ಲಿರುವ ಹಳ್ಳಿಯ ಪ್ರಾಥಮಿಕ ಶಾಲೆಯ ಅಧ್ಯಾಪಕರೂ ವಿಶ್ವವಿದ್ಯಾನಿಲಯದ ಪ್ರಸಾರಾಂಗದ ಪ್ರತಿನಿಧಿಯಾಗಿ ಹಳ್ಳಿಯ ಜನತೆಗೆ ಬೇಕಾದ ವಿಚಾರಗಳನ್ನು

ಪ್ರಸಾರಾಂಗಕ್ಕೆ ತಿಳಿಸಿ ಪ್ರಸಾರಾಂಗದ ಎಲ್ಲ ಸೌಲಭ್ಯಗಳನ್ನು ಪಡೆಯುವುದು ಸಾಧ್ಯವಾಗುವ ಕಾಲವು ಬಹುದೂರದಲ್ಲಿಲ್ಲ.

ನಮ್ಮ ಪ್ರಧಾನಿ ಶ್ರೀ ಜವಹರ್‌ಲಾಲ್ ನೆಹ್ರು ಅವರು ಬೆಂಗಳೂರಿನಲ್ಲಿ ನಡೆದ ವೈಜ್ಞಾನಿಕ ಸಮ್ಮೇಳನವನ್ನು ಉದ್ದೇಶಿಸಿ ಮಾತನಾಡುತ್ತ, ವೈಜ್ಞಾನಿಕ, ಯಾಂತ್ರಿಕ ಹಾಗೂ ಕೈಗಾರಿಕೆಗಳ ಮುನ್ನಡೆಯ ಪ್ರಯೋಜನವು ಜನಸಾಮಾನ್ಯರಿಗೆ ದೊರಕದಿದ್ದರೆ ದೇಶಕ್ಕೆ ಅಪಾರ ನಷ್ಟವಾಗುವುದೆಂಬುದನ್ನು ಖಚಿತಪಡಿಸಿದ್ದಾರೆ. ಇದು ಸರ್ವೋದಯದ ಕಾಲ. ಸರ್ವರ ಏಳಿಗೆಯೇ ಈ ಯುಗದ ದೀಕ್ಷಾಮಂತ್ರ. ಆದಕ್ಕಾಗಿ ಆರ್ಥಿಕ ಪ್ರಗತಿಯೊಡನೆ ವಿಚಾರಪರ ವಾದ ಜ್ಞಾನದ ಪ್ರಸಾರವೂ ನಡೆದು ಜನಸಾಮಾನ್ಯರಲ್ಲಿ ವಿಶ್ವವಿದ್ಯೆಯ ತಿಳಿವಳಿಕೆ ಮೂಡಿ ಸರ್ವರ ಶ್ರೇಯಸ್ಸಿನಿಂದ ಭವ್ಯ ಭಾರತದ ನಿರ್ಮಾಣವಾಗಬೇಕು.

ಈಗಿರುವ ಸ್ಥಿತಿಯಲ್ಲಿ ಹಳ್ಳಿಯಲ್ಲಿ ಹುಡುಗ ಜಾಣನಾದರೆ ಅವನು ಹಳ್ಳಿಗೆ ಎರವಾದಂತೆಯೇ. ಹಳ್ಳಿಯಲ್ಲಿ ಪರೀಕ್ಷೆ ಪಾಸು ಮಾಡಿ ಕಾಲೇಜಿಗೆ ಸೇರೋಣವೆಂದು ಬೆಂಗಳೂರಿಗೊ ಮೈಸೂರಿಗೊ ಹೋದ ಹುಡುಗ ಬೇಸಗೆ ರಜಕ್ಕೆ ಕೂಡ ಮನೆಗೆ ಹಿಂದಿರುಗುವುದಿಲ್ಲ. ಅವನಿಗೆ ಪಟ್ಟಣದ ರುಚಿ ಹತ್ತುತ್ತದೆ. ಅಲ್ಲಿಯೇ ಒಂದು ಸರ್ಕಾರಿ ಕೆಲಸವೋ ಕೂಲಿಯೋ ಮಾಡಿಕೊಂಡು ಇದ್ದುಬಿಡುತ್ತಾನೆ. ನಮ್ಮ ವಿದ್ಯಾಭ್ಯಾಸಕ್ರಮ ಜಾಣ್ಮೆಯನ್ನು ಹಳ್ಳಿಯಿಂದ ಹೊತ್ತುಕೊಂಡು ಹೋಗಿ ಪಟ್ಟಣಕ್ಕೆ ಹಾಕುವ ಒಂದು ಯಂತ್ರವಾಗಿ ಪರಿಣಮಿಸಿದೆ. ಹಾಗಾಗಕೂಡದು. ವಿದ್ಯಾಭ್ಯಾಸ ಮಾಡಲು ಹೋದ ಹಳ್ಳಿಯವರು ಮತ್ತೆ ಹಳ್ಳಿಗೇ ಬಂದು ನೆಲಸುವಂತಾಗಬೇಕು. ಕಾಲೇಜಿನಲ್ಲಿ ನಾವು ಈ ದೃಷ್ಟಿಯನ್ನು ಮೂಡಿಸಿ ಬೆಳೆಸಬೇಕಾಗಿದೆ. ಹಳ್ಳಿಯಲ್ಲಿ ಪಟ್ಟಣದ ಸೌಕರ್ಯಗಳು

ಲಭಿಸುವಂತಾದರೆ ಇದು ಸುಲಭವಾದಂತಾಗುತ್ತದೆ. ನಮ್ಮ ಮನೆಯ ಬಾಗಿಲಿಗೆ ವಿದ್ಯುಚ್ಛಕ್ತಿ ಬಂದಂದೇ ಸಮಸ್ತ ಪ್ರಪಂಚವೂ ಬಾಗಿಲಿಗೆ ಬಂದಂತೆ. ಹಾಗೆ ಹಳ್ಳಿಹಳ್ಳಿಗೂ ವಿದ್ಯುಚ್ಛಕ್ತಿ ಬಂದಿತೆಂದರೆ, ಮೈಸೂರಿನಲ್ಲಿ ರೇಡಿಯೋ ಮುಂದೆ ಕುಳಿತು ಯಾವ ಯಾವ ದೇಶಗಳ ಸಂಪರ್ಕಗಳನ್ನು ಇಟ್ಟುಕೊಳ್ಳಬಹುದೋ ಅದೇ ಸಂಪರ್ಕವನ್ನು ಹಳ್ಳಿಯಲ್ಲಿಯೂ ಪಡೆಯಬಹುದು. ಹಳ್ಳಿಯ ಜೀವನ ಸುಸಂಸ್ಕೃತವಾಗಿ, ಸುಸಜ್ಜಿತವಾಗಿ, ವೈಜ್ಞಾನಿಕವಾಗಿ ಆಗಬೇಕು.

ಕಡೆಯದಾಗಿ, ಪ್ರತಿಯೊಬ್ಬನೂ ತಾನು ಎಲ್ಲಿದ್ದರೆ ಅಲ್ಲಿ ಇದ್ದುಕೊಂಡು ತನ್ನ ಪರಿಪೂರ್ಣತೆಯನ್ನು ಸಮಾಜದ ಕಲ್ಯಾಣವನ್ನೂ ಸಾಧಿಸಲು ಯತ್ನಿಸಬೇಕು. 'Sermon on the mount' ಎಂಬ ಪ್ರಾರ್ಥನೆಯಲ್ಲಿ 'ನಿನ್ನ ರಾಜ್ಯವು ಬರಲಿ' ಎಂಬ ಅರ್ಥದ ಮಾತಿದೆ. ಅವನ ರಾಜ್ಯ ಅವನಿರುವಲ್ಲಿಂದ ಇಲ್ಲಿಗೆ ಬರುವುದು ಹೇಗೆ? ಆ ರಾಜ್ಯ ನಮ್ಮ ಹೃದಯಗಳಲ್ಲಿ ಸ್ವಲ್ಪಸ್ವಲ್ಪವಾಗಿ ಅಂಕುರಾರ್ಪಣಗೊಂಡು ಇತರ ಹೃದಯಗಳಿಗೂ ಅದು ಹಬ್ಬಬೇಕು. ಆ ಆಶಯವನ್ನು 'ಅಗ್ನಿಹಂಸ' ಕವನ ಸಂಗ್ರಹದಲ್ಲಿರುವ ಈ ಕವನ ನಿರೂಪಿಸುತ್ತದೆ.

ನಿನ್ನ ಪದಕಮಲದಲಿ ಮನೆ ಮಾಡಿರುವ ನನಗೆ
ಆ ಸ್ಥಾನ ಈ ಸ್ಥಾನ ಎಲ್ಲವಾಸ್ಥಾನ !
ಅಲ್ಲಲ್ಲಿ ಎನಲೇನು ? ನೀನೆ ಅಡಿಯಿಡುವಲ್ಲಿ
ದಿವ್ಯ ಪದವಿಗಳಲ್ತೆ, ಮಾನಾಪಮಾನ ?
ಬೆಟ್ಟಗಳನೇರುವೆಯೋ, ಕಣಿವೆಗಳನಿಳಿಯುವೆಯೊ,
ಕೆಸರುಸುಬುಗಳೊಳಾಡಿ ವಿಹರಿಪೆಯೊ ನೀನು ?

ಇಲ್ಲಿ ಸಂಚರಿಸಲ್ಲಿ ಚರಿಸದಿರೆನಲಂ ನನಗೆ
ನಿನ್ನ ಲೀಲೆಗೆ ಗೆರೆಯಂನೆಳೆವ ಹಕ್ಕೇನಂ ?
ಎಲ್ಲಿ ನೀ ಪದವಿಡಂವೆ ಅಲ್ಲೆ ಉತ್ತಮ ಪದವಿ ;
ನಿನ್ನ ಪದವಲ್ಲದಾ ಪದವಿಯಂೂ ಹೀನ.
ನಿನ್ನಡಿಯಂ ಪುಡಿಯಂ ಬಡತನವೆ ಕಡವರ ಕಣಾ
ನಿನ್ನಡಿಗೆ ದೂರವಿರೆ ಧನಿಕನೂ ದೀನ.

ಅಣ್ಣನ ಆದರ್ಶ—ಡಾ. ಟಿ. ಜಿ. ಸಿದ್ಧಪ್ಪಾರಾಧ್ಯ
ಹೊಸಗನ್ನಡ ಭಾವಗೀತೆಗಳಲ್ಲಿ ಜೀವನ ವಿಕಾಸ—
ದೇವಂಗಿ ಟಿ. ಚಂದ್ರಶೇಖರ
ಸೂರದಾಸ—ಎಂ. ಎಸ್. ಕೃಷ್ಣಮೂರ್ತಿ
ಜನ್ನ—ಡಾ. ಸಿ. ಪಿ. ಕೃಷ್ಣಕುಮಾರ್
ರತ್ನಾಕರ ಮಹಾಕವಿ—ಜಿ. ಬ್ರಹ್ಮಪ್ಪ
ಮಾಘಕವಿ—ವಿದ್ವಾನ್ ಎಂ. ಜಿ. ನಂಜುಂಡಾರಾಧ್ಯ
ನಿಜಗುಣಶಿವಯೋಗಿ—ಎಚ್. ಗಂಗಾಧರನ್
ಮುದ್ರಾರಾಕ್ಷಸ—ಡಾ. ಎನ್. ಎಸ್. ಅನಂತರಂಗಾಚಾರ್
ರಾಘವಾಂಕ—ರಾಮೇಗೌಡ
ಮೂರನೆಯ ಮಂಗರಸ ಕವಿ—ಹಂಪ ನಾಗರಾಜಯ್ಯ
ನಾಗಚಂದ್ರ—ಡಾ. ಸಿ. ಪಿ. ಕೃಷ್ಣಕುಮಾರ್
ವಡ್ಡಾರಾಧನೆ—ಹಂಪ ನಾಗರಾಜಯ್ಯ
ಮಹಾಕವಿ ಭಾರವಿ—ವಿದ್ವಾನ್ ಎಂ. ಜಿ. ನಂಜುಂಡಾರಾಧ್ಯ
ಕವಿ ಮುರಾರಿ—ವಿದ್ವಾನ್ ಎಂ. ಜಿ. ನಂಜುಂಡಾರಾಧ್ಯ
ಚನ್ನಬಸವಣ್ಣ—ಓ. ಎನ್. ಲಿಂಗಣ್ಣಯ್ಯ
ಕವಿ ಶ್ರೀಹರ್ಷ—ವಿದ್ವಾನ್ ಎಂ. ಜಿ. ನಂಜುಂಡಾರಾಧ್ಯ
ಕಬೀರದಾಸ—ಡಾ. ಹಿರಣ್ಮಯ
ವಿದ್ಯಾಪತಿ—ಎಂ. ಎಸ್. ಕೃಷ್ಣಮೂರ್ತಿ
ಕವಿ ಭಟ್ಟನಾರಾಯಣ—ವಿದ್ವಾನ್ ಎಂ. ಜಿ. ನಂಜುಂಡಾರಾಧ್ಯ
ಕಾವ್ಯದಲ್ಲಿ ಧ್ವನಿ—ಗುರುಪಾದ ಕೆ. ಹೆಗಡೆ
ಪೊನ್ನ—ಎನ್. ಅನಂತರಂಗಾಚಾರ್
ಎಡೆಯೂರು ತೋಂಟದ ಸಿದ್ಧಲಿಂಗಯತಿ—ಓ. ಎನ್. ಲಿಂಗಣ್ಣಯ್ಯ
ದೇವರ ದಾಸಿಮಯ್ಯ—ಕೆ. ಅನಂತರಾಮು
ಸಂಸ್ಕೃತ ಸಾಹಿತ್ಯ—ಡಾ. ಆರ್. ಎಸ್. ಶಿವಗಣೇಶಮೂರ್ತಿ
ಚಾಮುಂಡರಾಯ—ಡಾ. ಟಿ. ವಿ. ವೆಂಕಟಾಚಲಶಾಸ್ತ್ರೀ
ಶ್ರೀ ಸಮರ್ಥ ರಾಮದಾಸರು—ಬಿ. ಪಿ. ಚಂದ್ರಾಬಾಯಿ
ಉಪಭಾಷಾ ಅಧ್ಯಯನ—ಶಾಲಿನಿ ರಘುನಾಥ
ಭಾರತೀಯ ಮಹಿಳಾ ಪರಂಪರೆ—ಬಿ. ಪಿ. ಚಂದ್ರಾಬಾಯಿ
ಬಂಧುವರ್ಮ—ಬಿ. ಎಸ್. ಸಣ್ಣಯ್ಯ
ಶ್ರೀರಾಮಾಯಣದರ್ಶನಂ—ಒಂದು ಸಮೀಕ್ಷೆ—ಡಾ. ಸಿ. ಪಿ. ಕೃಷ್ಣಕುಮಾರ್
ದುರ್ಗಸಿಂಹ—ರಾಮೇಗೌಡ

೬೨. ಪಾಲ್ಕುರಿಕೆ ಸೋಮನಾಥ—ಡಾ. ಆರ್ವಿಯಸ್ ಸುಂದರಂ
೬೩. ಕನ್ನಡ ಸಾಹಿತ್ಯದ ಭಾಗವತ ಕವಿಗಳು—
ಬಿ. ಎಸ್. ವೇಣುಗೋಪಾಲ್
೬೪. ಕುಮಾರ ವಾಲ್ಮೀಕಿ—ಡಾ. ಹೊಸಬೆಟ್ಟು ಸೀತಾರಾಮ ಆಚಾರ್ಯ
೬೫. ಕವಿರಾಜ ಮಾರ್ಗ—ಸೀತಾರಾಮ ಜಾಗೀರ್‌ದಾರ್
೬೬. ಪಾರ್ಶ್ವ ಪಂಡಿತ—ಬಿ. ನಂ. ಚಂದ್ರಯ್ಯ
೬೭. ನೃತ್ತವಿಲಾಸ—ಡಾ. ಕೆ. ರಾಘವೇಂದ್ರರಾವ್
೬೮. ಅಗ್ಗಳದೇವ—ಎಚ್. ಎನ್. ಕೃಷ್ಣಾಜೋಯಿಸ್
೬೯. ಕನಕದಾಸ—ಮಳಲಿ ವಸಂತಕುಮಾರ್
೭೦. ಶ್ರೀಪಾದರಾಜರು—ಡಾ. ಟಿ. ಎನ್. ನಾಗರತ್ನ
೭೧. ಸಿದ್ಧರಾಮ—ಡಾ. ಎಂ. ರಾಮಕೃಷ್ಣ
೭೨. ರನ್ನ—ಡಾ. ಸಿ. ಪಿ. ಕೃಷ್ಣಕುಮಾರ್
೭೩. ಕನ್ನಡ ಕವಿಗಳು ಕಂಡ ಕ್ರೀಡೆಗಳು—ಡಾ. ಕೆ. ಶ್ರೀಕಂಠಯ್ಯ
೭೪. ಅಪರಾಧ ಪರಿಚಯ—ಆನಂದಮೂರ್ತಿ ಮಲಾಕಿ